ನೀಲುಗಳು-ಲಿ-1
Stame6
18-03-2021

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2804 |
| ಮಾನ್ಯ ಸದಸ್ಯರ ಹೆಸರು | ಶ್ರೀ ಜ್ಯೋತಿ ಗಣೇಶ್ ಜಿ.ಬಿ (ತುಮಕೂರು ನಗರ) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ತುಮಕೂರು ಜಿಲ್ಲಾ ಆಸ್ಪತ್ರೆಯಲ್ಲಿ ಫಾರ್ಮಸಿ ಅಧಿಕಾರಿಗಳ ಹುದ್ದೆಗಳು ಅನೇಕ ವರ್ಷಗಳಿಂದ ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಖಾಲಿ ಹುದ್ದೆಗಳ ಭರ್ತಿಗೆ ಸರ್ಕಾರ ತೆಗೆದುಕೊಂಡ ಕ್ರಮವೇನು;</td><td>ಜಿಲ್ಲಾ ಆಸ್ಪತ್ರೆ ತುಮಕೂರು ಇಲ್ಲಿನ ಫಾರ್ಮಾಸಿ ಅಧಿಕಾರಿಗಳ ವಿವರ ಈ ಕೆಳಕಂಡಂತಿರುತ್ತದೆ.<br>
<table>
<tr><th>ಹುದ್ದೆ</th><th>ಮಂಜೂರು</th><th>ಕಾರ್ಯನಿರತ</th><th>ಖಾಲಿ</th></tr>
<tr><td>ಕಿರಿಯ ಫಾರ್ಮಾಸಿ ಅಧಿಕಾರಿಗಳು</td><td>2</td><td>1</td><td>ದಿನಾಂಕ: 28-08-2020 ರಿಂದ 1 ಹುದ್ದೆ ಖಾಲಿ ಇರುತ್ತದೆ.</td></tr>
<tr><td>ಹಿರಿಯ ಫಾರ್ಮಾಸಿ ಅಧಿಕಾರಿಗಳು</td><td>4</td><td>3</td><td>ದಿನಾಂಕ:24-09-2020 ರಿಂದ 1 ಹುದ್ದೆ ಖಾಲಿ ಇರುತ್ತದೆ.</td></tr>
</table>
ಇಲಾಖೆಯಲ್ಲಿನ 400 ಕಿರಿಯ ಫಾರ್ಮಾಸಿ ಅಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ ಪರಿಶೀಲಿಸಲಾಗುತ್ತಿದೆ. ಹಿರಿಯ ಫಾರ್ಮಾಸಿ ಅಧಿಕಾರಿ ಹುದ್ದೆಯನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಪದೋನ್ನತಿ ಮುಖಾಂತರ ಭರ್ತಿ ಮಾಡಬೇಕಾಗಿರುತ್ತದೆ.</td></tr>
<tr><td>ಆ</td><td>ತುಮಕೂರು ಜಿಲ್ಲಾ ಆಸ್ಪತ್ರೆಯಲ್ಲಿ ಹಾಸಿಗೆಗಳಿಗೆ ಅನುಸಾರವಾಗಿ ಫಾರ್ಮಸಿ ಅಧಿಕಾರಿಗಳ ಹುದ್ದೆಗಳು ಮಂಜೂರಾಗಿವೆಯೇ;</td><td>ಹೌದು<br>ಜಿಲ್ಲಾ ಆಸ್ಪತ್ರೆ ತುಮಕೂರು ಇದು 400 ಹಾಸಿಗೆಗಳ ಆಸ್ಪತ್ರೆಯಾಗಿದ್ದು, ಹಾಸಿಗೆಗಳಿಗೆ ಅನುಸಾರವಾಗಿ 6 ಫಾರ್ಮಸಿ ಅಧಿಕಾರಿಗಳ ಹುದ್ದೆಗಳು ಮಂಜೂರಾಗಿವೆ.</td></tr>
<tr><td>ಇ</td><td>ಮಂಜೂರಾಗಿದ್ದಲ್ಲಿ, ಆ ಹುದ್ದೆಗಳನ್ನು ಭರ್ತಿ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ?</td><td>ಇಲಾಖೆಯಲ್ಲಿನ 400 ಕಿರಿಯ ಫಾರ್ಮಾಸಿ ಅಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ ಪರಿಶೀಲಿಸಲಾಗುತ್ತಿದೆ. ಹಿರಿಯ ಫಾರ್ಮಾಸಿ ಅಧಿಕಾರಿ ಹುದ್ದೆಯನ್ನು ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಪದೋನ್ನತಿ ಮುಖಾಂತರ ಭರ್ತಿ ಮಾಡಬೇಕಾಗಿರುತ್ತದೆ.</td></tr>
</table>

ಸಂಖ್ಯೆ: ಆಕುಕ ಆಕುಕ 108 ಹೆಚ್‌ಎಸ್‌ಎಂ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2983

ಮಾನ್ಯ ಸದಸ್ಯರ ಹೆಸರು : ಶ್ರೀಮತಿ ಕುಸುಮಾವತಿ ಚನ್ನಬಸಪ್ಪ ಶಿವಳ್ಳಿ (ಕುಂದಗೋಳ)

ಉತ್ತರಿಸಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕುಂದಗೋಳ ವಿಧಾನಸಭಾ ಕ್ಷೇತ್ರದ ಗುಡಗೇರಿ ಗ್ರಾಮದ ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ತೆಗೆದುಕೊಂಡ ಕ್ರಮಗಳೇನು; | ಬಂದಿದೆ.<br><br>ಆರ್ಥಿಕ ವಿಸ್ತರತೆ ಇಲ್ಲದಿರುವುದರಿಂದ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸಮುದಾಯ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಗಳನ್ನು ಸಧ್ಯಕ್ಕೆ ತಡೆಹಿಡಿಯಲಾಗಿದೆ. |
| ಆ | ಕುಂದಗೋಳ ಮತಕ್ಷೇತ್ರದ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ವೈದ್ಯಾಧಿಕಾರಿಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ | ಬಂದಿದ್ದಲ್ಲಿ, ಈ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು; | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ ದಂತ ಆರೋಗ್ಯಾಧಿಕಾರಿ/ತಜ್ಞ ವೈದ್ಯರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿದ್ದು, ವಿಶೇಷ ನೇಮಕಾತಿ ಸಮಿತಿ ಮೂಲಕ ಖಾಲಿ ಇರುವ 824 ತಜ್ಞ ವೈದ್ಯರ ಹುದ್ದೆ, 1246 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಮತ್ತು 88 ದಂತ ಆರೋಗ್ಯಾಧಿಕಾರಿ ಹುದ್ದೆಗಳನ್ನು ಭರ್ತಿ ಮಾಡಲು ದಿನಾಂಕ:10.09.2020ರ ಅಧಿಸೂಚನೆ ಸಂಖ್ಯೆ:ಎಸ್‌ಆರ್‌ಸಿ/68/2019-20ರಲ್ಲಿ ಅಧಿಸೂಚನೆಯನ್ನು ಹೊರಡಿಸಲಾಗಿದ್ದು, ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆ ಪ್ರಕ್ರಿಯೆ ಪೂರ್ಣಗೊಂಡಿರುತ್ತದೆ. ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಹಂತದಲ್ಲಿದೆ. |
| ಈ | ಕುಂದಗೋಳ ಮತಕ್ಷೇತ್ರದಲ್ಲಿ ಹೊಸ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ತೆರೆಯಲು ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು? | ಕುಂದಗೋಳ ಮತಕ್ಷೇತ್ರದಲ್ಲಿ ಹೊಸ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ತೆರೆಯುವ ಪ್ರಸ್ತಾವನೆ ಸಧ್ಯಕ್ಕೆ ಇರುವುದಿಲ್ಲ. |

ಆಕುಕ 45 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 2626 |
| ಮಾನ್ಯ ಸದಸ್ಯರ ಹೆಸರು | ಶ್ರೀ ಮಾಡಾಳ್ ವಿರೂಪಾಕ್ಷಪ್ಪ.ಕೆ (ಚನ್ನಗಿರಿ) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ದಾವಣಗೆರೆ ಜಿಲ್ಲೆ, ಚನ್ನಗಿರಿ ವಿಧಾನ ಸಭಾ ಕ್ಷೇತ್ರದ ವಡ್ನಾಳ್ ಗ್ರಾಮಕ್ಕೆ, ಪ್ರಾಥಮಿಕ ಆರೋಗ್ಯ ಕೇಂದ್ರ ಮಂಜೂರಾಗದೇ ಕಟ್ಟಡವನ್ನು ನಿರ್ಮಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ | ಈಗಾಗಲೇ ಕೆ.ಹೆಚ್.ಎಸ್.ಆರ್.ಡಿ.ಪಿ ವತಿಯಿಂದ ರೂ.1.83 ಕೋಟಿಗಳ ಅನುದಾನದಲ್ಲಿ ನಿರ್ಮಿಸಿರುವ ಕಟ್ಟಡಕ್ಕೆ ಪ್ರಾಥಮಿಕ ಆರೋಗ್ಯ ಕೇಂದ್ರ ಮಂಜೂರಾಗದಿರುವುದರಿಂದ ಈ ಕಟ್ಟಡವು ಅನೈತಿಕ ಚಟುವಟಿಕೆಗಳ ತಾಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಇ | ಸರ್ಕಾರದ ಹಣ ಉಪಯೋಗಿಸಿ ಕಟ್ಟಿರುವ ಈ ಕಟ್ಟಡವು ಹಾಳಾಗದಂತೆ ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಯಾವಾಗ ಪ್ರಾರಂಭಿಸಲಾಗುವುದು? | 2011ರ ಜನಗಣತಿಯ 9 ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸ್ಥಾಪನೆಗೆ ಅವಕಾಶವಿದ್ದು, ಪ್ರಸ್ತುತ 23 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಹೆಚ್ಚುವರಿಯಾಗಿ 14 ಪ್ರಾಥಮಿಕ ಆರೋಗ್ಯ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ.<br>ಆದಾಗ್ಯೂ ವಡ್ನಾಲ್ ಗ್ರಾಮದಲ್ಲಿ ಈಗಾಗಲೇ ಕಟ್ಟಡ ನಿರ್ಮಾಣವಾಗಿರುವುದರಿಂದ ಅಲ್ಲಿ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಮಂಜೂರು ಮಾಡುವ ಕುರಿತು ಸರ್ಕಾರದ ಪರಿಶೀಲನೆಯಲ್ಲಿದೆ. |

**ಸಂಖ್ಯೆ:ಆಕುಕ 40 ಎಸ್‌ಎಂಎಂ 2021**

(ಡಾ॥ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3048
ಸದಸ್ಯರ ಹೆಸರು : ಶ್ರೀ ರಾಜೀವ್ ಪಿ. (ಕುಡಚಿ)
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕುಡಚಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಎಷ್ಟು ಅರಣ್ಯ ಪ್ರದೇಶ ಇದೆ; | ಕುಡಚಿ ಮತಕ್ಷೇತ್ರದ ವ್ಯಾಪ್ತಿಯಲ್ಲಿ 178.78 ಹೆಕ್ಟೇರ್ ಅರಣ್ಯ ಪ್ರದೇಶವಿರುತ್ತದೆ. |
| ಆ) | ಕಳೆದ 3 ವರ್ಷಗಳಲ್ಲಿ ರಾಯಭಾಗ ತಾಲ್ಲೂಕಿನಲ್ಲಿ ಯಾವ ಯಾವ ಯೋಜನೆ / ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ; (ವರ್ಷವಾರು, ಯೋಜನಾವಾರು ಹಾಗೂ ಏಜೆನ್ಸಿವಾರು ಮಾಹಿತಿ ನೀಡುವುದು) | ಕಳೆದ 3 ವರ್ಷಗಳಲ್ಲಿ ರಾಯಭಾಗ ತಾಲ್ಲೂಕಿನಲ್ಲಿ ಹಮ್ಮಿಕೊಂಡ ಕಾಮಗಾರಿಗಳ ವಿವರಗಳನ್ನು ಅನುಬಂಧ-1 ರಿಂದ 4ರಲ್ಲಿ ಒದಗಿಸಿದೆ. |
| ಇ) | ಕುಡಚಿ ಮತಕ್ಷೇತ್ರವು ಹಿಂದುಳಿದ ಮತ ಕ್ಷೇತ್ರವಾಗಿದ್ದು, ಟ್ರೀ ಪಾರ್ಕ್ (ವೃಕ್ಷೋದ್ಯಾನ) ಮಂಜೂರು ಮಾಡಲು ಸರ್ಕಾರ ಕ್ರಮ ಕೈಗೊಂಡಿದೆಯೇ; | ಕುಡಚಿ ಮತಕ್ಷೇತ್ರದಲ್ಲಿ ಟ್ರೀ ಪಾರ್ಕ್ (ವೃಕ್ಷೋದ್ಯಾನ) ನಿರ್ಮಿಸುವ ಬಗ್ಗೆ ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |
| ಈ) | ಹಾಗಿದ್ದಲ್ಲಿ, ಎಷ್ಟು ದಿನಗಳಲ್ಲಿ ಟ್ರೀ ಪಾರ್ಕ್ ಮಂಜೂರು ಮಾಡಲಾಗುವುದು? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

ಸಂಖ್ಯೆ: ಅಪಜೀ 40 ಎಫ್‌ಎಎಫ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

ಅನುಬಂಧ - 1

2017-2018 ನೇ ಸಾಲಿನಲ್ಲಿ ರಾಯಭಾಗ ತಾಲ್ಲೂಕಿನಲ್ಲಿ ಹಮ್ಮಿಕೊಂಡಿರುವ ಕಾಮಗಾರಿಗಳ ವಿವರ

ವರ್ಷ: 2017-18

| ಕ್ರ.ಸಂ. | ವಿಭಾಗವಾರು | ಯೋಜನೆ | ಟೆಂಡರ್ ಪಡೆದ ಏಜೆನ್ಸಿ/ಗುತ್ತಿಗೆ/ಇಲಾಖಾ ವತಿಯಿಂದ | ಹಂಚಿಕೆ (ರೂ.ಗಳಲ್ಲಿ) | ಬಿಡುಗಡೆ (ರೂ.ಗಳಲ್ಲಿ | ವೆಚ್ಚ (ರೂ.ಗಳಲ್ಲಿ) | ಕಾಮಗಾರಿಗಳ ವಿವರ | ಹೆ. | ಕಿ.ಮೀ. | ಸಂಖ್ಯೆ | ಘ.ಮೀ. | ಕಾಮಗಾರಿ ಯಾವ ಹಂತದಲ್ಲಿರುತ್ತದೆ |
|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1 | ಗೋಕಾಕ | ಶ್ರೀಚಂದನವನ | ಇಲಾಖೆ ವತಿಯಿಂದ | 13020.00 | 13020.00 | 13020.00 | 8*12 ಅಳತೆಯ ಸಸಿಗಳ ನಿರ್ವಹಣೆ | - | - | 3000 | - | ಮುಕ್ತಾಯವಾಗಿದೆ |
| | ಗೋಕಾಕ | ಶ್ರೀಚಂದನವನ | ಇಲಾಖೆ ವತಿಯಿಂದ | 45090.00 | 45090.00 | 45090.00 | 8*12 ಅಳತೆಯ ಸಸಿಗಳನ್ನು ಬೆಳೆಸುವುದು | - | - | 3000 | | ಮುಕ್ತಾಯವಾಗಿದೆ |
| | | | ಒಟ್ಟು: | **58110.00** | **58110.00** | **58110.00** | | | | 6000 | | |
| 2 | ಗೋಕಾಕ | ಆರ್.ಆರ್.ಪಿ | ಇಲಾಖೆ ವತಿಯಿಂದ | 657075.00 | 657075.00 | 657075.00 | ರಸ್ತೆ ಬದಿ ನೆಡುತೋಪು ಬೆಳೆಸುವುದು | | 3 | | | ಮುಕ್ತಾಯವಾಗಿದೆ |
| | ಗೋಕಾಕ | ಆರ್.ಆರ್.ಪಿ | ಇಲಾಖೆ ವತಿಯಿಂದ | 526000.00 | 526000.00 | 526000.00 | ರಸ್ತೆ ಬದಿ ನೆಡುತೋಪು 1ನೇ ವರ್ಷ ನಿರ್ವಹಣೆ | | 10 | | | ಮುಕ್ತಾಯವಾಗಿದೆ |
| | ಗೋಕಾಕ | ಆರ್.ಆರ್.ಪಿ | ಇಲಾಖೆ ವತಿಯಿಂದ | 229320.00 | 229320.00 | 229320.00 | ರಸ್ತೆ ಬದಿ ನೆಡುತೋಪು 2ನೇ ವರ್ಷ ನಿರ್ವಹಣೆ | | 6. | | | ಮುಕ್ತಾಯವಾಗಿದೆ |
| | ಗೋಕಾಕ | ಆರ್.ಆರ್.ಪಿ | ಇಲಾಖೆ ವತಿಯಿಂದ | 190750.00 | 190750.00 | 190750.00 | ರಸ್ತೆ ಬದಿ ನೆಡುತೋಪು 3ನೇ ವರ್ಷ ನಿರ್ವಹಣೆ | | 5 | | | ಮುಕ್ತಾಯವಾಗಿದೆ |
| | | | ಒಟ್ಟು: | **1603145.00** | **1603145.00** | **1603145.00** | | 0 | 24 | 0 | | |
| 3 | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 647835.00 | 647835.00 | 647835.00 | ನೆಡುತೋಪು ಬೆಳೆಸುವುದು | 3 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 611700.00 | 611700.00 | 611700.00 | 1ನೇ ವರ್ಷ ನೆಡುತೋಪು ನಿರ್ವಹಣೆ | 12 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 23600.00 | 23600.00 | 23600.00 | 2ನೇ ವರ್ಷ ನೆಡುತೋಪು ನಿರ್ವಹಣೆ | 20 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 11800.00 | 11800.00 | 11800.00 | 3ನೇ ವರ್ಷ ನೆಡುತೋಪು ನಿರ್ವಹಣೆ | 10 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 5900.00 | 5900.00 | 5900.00 | 4ನೇ ವರ್ಷ ನೆಡುತೋಪು ನಿರ್ವಹಣೆ | 5 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 30470.00 | 30470.00 | 30470.00 | 10*16 ಅಳತೆಯ ಸಸಿಗಳ ನಿರ್ವಹಣೆ | | | 4400 | | ಮುಕ್ತಾಯವಾಗಿದೆ |
| | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 169080.00 | 169080.00 | 169080.00 | 14*20 ಅಳತೆಯ ಸಸಿ ಬೆಳೆಸುವುದು | | | 3000 | | ಮುಕ್ತಾಯವಾಗಿದೆ |
| | | | ಒಟ್ಟು: | **1500385.00** | **1500385.00** | **1500385.00** | | 50 | 0 | 7400 | | |
| 4 | ಬೆಳಗಾವಿ ಸಾ.ಅ | ರಸ್ತೆಬದಿ ನೆಡತೋಪು (ಪ್ರಕಾ) | ಇಲಾಖಾ ವತಿಯಿಂದ | 1127400.00 | 1127400.00 | 1127400.00 | ನೆಡತೋಪು ಬೆಳೆಸುವುದು | - | 7.00 | - | - | ಮುಕ್ತಾಯವಾಗಿದೆ |
| | | | ಒಟ್ಟು: | **1127400.00** | **1127400.00** | **1127400.00** | | | 7.00 | | | |
| 5 | ಬೆಳಗಾವಿ ಸಾ.ಅ | ಆರ್.ಎಸ್.ಪಿ.ಡಿ | ಇಲಾಖಾ ವತಿಯಿಂದ | 37600.00 | 37600.00 | 37600.00 | ಸಸಿಗಳನ್ನು ಬೆಳಸುವುದು | - | - | 2500 | - | ಮುಕ್ತಾಯವಾಗಿದೆ |
| | | | ಒಟ್ಟು: | **37600.00** | **37600.00** | **37600.00** | | | | 2500 | | |
| | | | ಅಂತೂ ಒಟ್ಟು: | **4326640.00** | **4326640.00** | **4326640.00** | | **50.00** | **31.00** | **15900.00** | **0.00** | |

# ಅನುಬಂಧ – 2

## 2018–2019 ನೇ ಸಾಲಿನಲ್ಲಿ ರಾಯಭಾಗ ತಾಲ್ಲೂಕಿನಲ್ಲಿ ಹಮ್ಮಿಕೊಂಡಿರುವ ಕಾಮಗಾರಿಗಳ ವಿವರ

ವರ್ಷ: 2018–19

| ಕ್ರ.ಸಂ. | ವಿಭಾಗವಾರು | ಯೋಜನೆ | ಟೆಂಡರ್ ಪಡೆದ ಏಜೆನ್ಸಿ/ಗುತ್ತಿಗೆ/ಇಲಾಖಾ ವತಿಯಿಂದ | ಹಂಚಿಕೆ (ರೂ.ಗಳಲ್ಲಿ) | ಬಿಡುಗಡೆ (ರೂ.ಗಳಲ್ಲಿ) | ವೆಚ್ಚ (ರೂ.ಗಳಲ್ಲಿ) | ಕಾಮಗಾರಿಗಳ ವಿವರ | ಹೆ. | ಕಿ.ಮೀ. | ಸಂಖ್ಯೆ | ಘ.ಮೀ. | ಕಾಮಗಾರಿ ಯಾವ ಹಂತದಲ್ಲಿರುತ್ತದೆ |
|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1 | ಗೋಕಾಕ | ಆರ್.ಆರ್.ಪಿ | ಇಲಾಖೆ ವತಿಯಿಂದ | 147234.00 | 147234.00 | 147234.00 | ರಸ್ತೆ ಬದಿ ನೆಡುತೋಪು ಬೆಳೆಸುವುದು | | 3 | | | ಮುಕ್ತಾಯವಾಗಿದೆ |
| | ಗೋಕಾಕ | ಆರ್.ಆರ್.ಪಿ | ಇಲಾಖೆ ವತಿಯಿಂದ | 202710.00 | 202710.00 | 202710.00 | ರಸ್ತೆ ಬದಿ ನೆಡುತೋಪು 1ನೇ ವರ್ಷ ನಿರ್ವಹಣೆ | | 3 | | | ಮುಕ್ತಾಯವಾಗಿದೆ |
| | ಗೋಕಾಕ | ಆರ್.ಆರ್.ಪಿ | ಇಲಾಖೆ ವತಿಯಿಂದ | 397250.00 | 397250.00 | 397250.00 | ರಸ್ತೆ ಬದಿ ನೆಡುತೋಪು 2ನೇ ವರ್ಷ ನಿರ್ವಹಣೆ | | 10 | | | ಮುಕ್ತಾಯವಾಗಿದೆ |
| | ಗೋಕಾಕ | ಆರ್.ಆರ್.ಪಿ | ಇಲಾಖೆ ವತಿಯಿಂದ | 237900.00 | 237900.00 | 237900.00 | ರಸ್ತೆ ಬದಿ ನೆಡುತೋಪು 3ನೇ ವರ್ಷ ನಿರ್ವಹಣೆ | | 6 | | | ಮುಕ್ತಾಯವಾಗಿದೆ |
| | ಗೋಕಾಕ | ಆರ್.ಆರ್.ಪಿ | ಇಲಾಖೆ ವತಿಯಿಂದ | 198250.00 | 198250.00 | 198250.00 | ರಸ್ತೆ ಬದಿ ನೆಡುತೋಪು 4ನೇ ವರ್ಷ ನಿರ್ವಹಣೆ | | 5 | | | ಮುಕ್ತಾಯವಾಗಿದೆ |
| | | | ಒಟ್ಟು: | 1183344.00 | 1183344.00 | 1183344.00 | | 0 | 27 | 0 | 0 | |
| 2 | ಗೋಕಾಕ | ಶ್ರೀಚಂದನವನ | ಇಲಾಖೆ ವತಿಯಿಂದ | 13530.00 | 13530.00 | 13530.00 | 8*12 ಅಳತೆಯ ಸಸಿಗಳ ನಿರ್ವಹಣೆ | | | 3000 | | ಮುಕ್ತಾಯವಾಗಿದೆ |
| | | | ಒಟ್ಟು: | 13530.00 | 13530.00 | 13530.00 | | | | 3000 | | |
| 3 | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 510120.00 | 510120.00 | 510120.00 | ನೆಡುತೋಪು ಬೆಳೆಸುವುದು | 3 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 158190.00 | 158190.00 | 158190.00 | 1ನೇ ವರ್ಷ ನೆಡುತೋಪು ನಿರ್ವಹಣೆ | 3 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 14760.00 | 14760.00 | 14760.00 | 2ನೇ ವರ್ಷ ನೆಡುತೋಪು ನಿರ್ವಹಣೆ | 12 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿ.ಯು.ಎ | ಇಲಾಖೆ ವತಿಯಿಂದ | 12300.00 | 12300.00 | 12300.00 | 4ನೇ ವರ್ಷ ನೆಡುತೋಪು ನಿರ್ವಹಣೆ | 10 | | | | ಮುಕ್ತಾಯವಾಗಿದೆ |
| | | | ಒಟ್ಟು: | 695370.00 | 695370.00 | 695370.00 | | 28 | | | | |
| 4 | ಗೋಕಾಕ | ಆರ್.ಎಸ್.ಪಿ.ಡಿ | ಇಲಾಖೆ ವತಿಯಿಂದ | 9020.00 | 9020.00 | 9020.00 | 8*12 ಅಳತೆಯ ಸಸಿಗಳನ್ನು ನಿರ್ವಹಣೆ | | | 2000 | | ಮುಕ್ತಾಯವಾಗಿದೆ |
| | ಬೆಳಗಾವಿ ಸಾ.ಅ. | ಆರ್.ಎಸ್.ಪಿ.ಡಿ | ಇಲಾಖೆ ವತಿಯಿಂದ | 117100.00 | 117100.00 | 117100.00 | ಸಸಿಗಳನ್ನು ಬೆಳೆಸುವದು | – | – | 6800 | – | ಮುಕ್ತಾಯವಾಗಿದೆ |
| | | | ಒಟ್ಟು: | 126120.00 | 126120.00 | 126120.00 | | | | 8800 | | |
| 5 | ಬೆಳಗಾವಿ ಸಾ.ಅ. | ರಸ್ತೆಬದಿ ನೆಡುತೋಪು (ಪ್ರಕಾ) | ಇಲಾಖೆ ವತಿಯಿಂದ | 938900.00 | 938900.00 | 938900.00 | ನೆಡುತೋಪು ಬೆಳೆಸುವದು | – | 6.00 | – | – | ಮುಕ್ತಾಯವಾಗಿದೆ |
| | ಬೆಳಗಾವಿ ಸಾ.ಅ. | ರಸ್ತೆಬದಿ ನೆಡುತೋಪು (ಪ್ರಕಾ) | ಇಲಾಖೆ ವತಿಯಿಂದ | 14800.00 | 14800.00 | 14800.00 | ಸಸಿಗಳನ್ನು ಬೆಳೆಸುವದು | – | – | 240 | – | ಮುಕ್ತಾಯವಾಗಿದೆ |
| | | | ಒಟ್ಟು: | 953700.00 | 953700.00 | 953700.00 | | | 6 | 240 | | |
| 6 | ಬೆಳಗಾವಿ ಸಾ.ಅ. | ಹಸಿರು ಕರ್ನಾಟಕ | ಇಲಾಖಾ ವತಿಯಿಂದ | 243500.00 | 243500.000 | 243500.000 | ಸಸಿಗಳನ್ನು ಬೆಳೆಸುವದು | – | – | 13000 | – | ಮುಕ್ತಾಯವಾಗಿದೆ |
| | | | ಒಟ್ಟು: | 243500.00 | 243500.00 | 243500.00 | | | | 13000 | | |
| | | | ಅಂತೂ ಒಟ್ಟು: | 3215564.00 | 3215564.00 | 3215564.00 | | 28.00 | 33.00 | 25040 | 0.00 | |

ಅನುಬಂಧ – 3

## 2019–2020 ನೇ ಸಾಲಿನಲ್ಲಿ ರಾಯಭಾಗ ತಾಲ್ಲೂಕಿನಲ್ಲಿ ಹಮ್ಮಿಕೊಂಡಿರುವ ಕಾಮಗಾರಿಗಳ ವಿವರ

ವರ್ಷ: 2019–20

| ಕ್ರ.ಸಂ. | ವಿಭಾಗವಾರು | ಯೋಜನೆ | ಟೆಂಡರ್ ಪಡೆದ ಏಜೆನ್ಸಿ/ಗುತ್ತಿಗೆ/ಇಲಾಖಾ ವತಿಯಿಂದ | ಹಂಚಿಕೆ (ರೂ.ಗಳಲ್ಲಿ) | ಬಿಡುಗಡೆ (ರೂ.ಗಳಲ್ಲಿ) | ವೆಚ್ಚ (ರೂ.ಗಳಲ್ಲಿ) | ಕಾಮಗಾರಿಗಳ ವಿವರ | ಹೆ. | ಕಿ.ಮೀ. | ಸಂಖ್ಯೆ | ಘ.ಮೀ. | ಕಾಮಗಾರಿ ಯಾವ ಹಂತದಲ್ಲಿರುತ್ತದೆ |
|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1 | ಗೋಕಾಕ | ಶ್ರೀಚಂದನವನ | ಇಲಾಖೆ ವತಿಯಿಂದ | 5000.00 | 5000.00 | 5000.00 | ಅರಿವು ಮೂಡಿಸುವ ಕೆಲಸ | 1 | | | | ಮುಕ್ತಾಯವಾಗಿದೆ |
| | | | ಒಟ್ಟು: | **5000.00** | **5000.00** | **5000.00** | | **1.00** | | | | |
| 2 | ಬೆಳಗಾವಿ ಸಾ.ಅ | ಜಿಯುಎ | ಇಲಾಖಾ ವತಿಯಿಂದ | 557800.00 | 557800.00 | 557800.00 | ನೆಡುತೋಪು ಬೆಳೆಸುವದು | – | 3.00 | – | – | ಮುಕ್ತಾಯವಾಗಿದೆ |
| | ಬೆಳಗಾವಿ ಸಾ.ಅ | ಜಿಯುಎ | ಇಲಾಖಾ ವತಿಯಿಂದ | 64700.00 | 64700.00 | 64700.00 | ಸಸಿಗಳನ್ನು ಬೆಳೆಸುವದು | – | – | 1000 | – | ಮುಕ್ತಾಯವಾಗಿದೆ |
| | | | ಒಟ್ಟು: | **622500.00** | **622500.00** | **622500.00** | | | **3.00** | **1000** | | |
| 3 | ಬೆಳಗಾವಿ ಸಾ.ಅ | ಹಸಿರು ಕರ್ನಾಟಕ | ಇಲಾಖಾ ವತಿಯಿಂದ | 1829500.00 | 1829500.00 | 1829500.00 | ನೆಡುತೋಪು ಬೆಳೆಸುವದು | 50.00 | – | – | – | ಮುಕ್ತಾಯವಾಗಿದೆ |
| | ಬೆಳಗಾವಿ ಸಾ.ಅ | ಹಸಿರು ಕರ್ನಾಟಕ | ಇಲಾಖಾ ವತಿಯಿಂದ | 51600.00 | 51600.00 | 51600.00 | ಸಸಿಗಳನ್ನು ಬೆಳೆಸುವದು | – | – | 7000 | – | ಮುಕ್ತಾಯವಾಗಿದೆ |
| | | | ಒಟ್ಟು: | **1881100.00** | **1881100.00** | **1881100.00** | | **50.00** | | **7000** | | |
| 4 | ಬೆಳಗಾವಿ ಸಾ.ಅ | ಆರ್‌ಎಸ್‌ಪಿಡಿ | ಇಲಾಖಾ ವತಿಯಿಂದ | 145200.00 | 145200.00 | 145200.00 | ಸಸಿಗಳನ್ನು ಬೆಳೆಸುವದು | – | – | 11200 | – | ಮುಕ್ತಾಯವಾಗಿದೆ |
| | | | ಒಟ್ಟು: | **145200.00** | **145200.00** | **145200.00** | | | | **11200** | | |
| | | | ಅಂತೂ ಒಟ್ಟು: | **2653800.00** | **2653800.00** | **2653800.00** | | **51** | **3** | **19200** | **0** | |

## ಅನುಬಂಧ - 4

## 2020-2021 ನೇ ಸಾಲಿನಲ್ಲಿ ರಾಯಭಾಗ ತಾಲ್ಲೂಕಿನಲ್ಲಿ ಹಮ್ಮಿಕೊಂಡಿರುವ ಕಾಮಗಾರಿಗಳ ವಿವರ

ವರ್ಷ: 2020-21

| ಕ್ರ.ಸಂ. | ವಿಭಾಗವಾರು | ಯೋಜನೆ | ಟೆಂಡರ್ ಪಡೆದ ಏಜೆನ್ಸಿ/ಗುತ್ತಿಗೆ/ಇಲಾಖಾ ವತಿಯಿಂದ | ಹಂಚಿಕೆ (ರೂ.ಗಳಲ್ಲಿ) | ಬಿಡುಗಡೆ (ರೂ.ಗಳಲ್ಲಿ) | ವೆಚ್ಚ (ರೂ.ಗಳಲ್ಲಿ) | ಕಾಮಗಾರಿಗಳ ವಿವರ | ಹೆ. | ಕಿ.ಮೀ. | ಸಂಖ್ಯೆ | ಘ.ಮೀ. | ಕಾಮಗಾರಿ ಯಾವ ಹಂತದಲ್ಲಿರುತ್ತದೆ |
|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1 | ಗೋಕಾಕ | ಆರ್.ಎಸ್.ಪಿ.ಡಿ | ಇಲಾಖೆ ವತಿಯಿಂದ | 130028.00 | 130028.00 | 130028.00 | 8*12 ಮತ್ತು 6*9 ಅಳತೆಯ ಸಸಿ ಬೆಳೆಸುವುದು | | | 8365 | | ಮುಕ್ತಾಯವಾಗಿದೆ |
| | ಬೆಳಗಾವಿ ಸಾ.ಅ | ಆರ್.ಎಸ್.ಪಿ.ಡಿ | ಇಲಾಖಾ ವತಿಯಿಂದ | 25000.00 | 25000.00 | 25000.00 | ಸಸಿಗಳನ್ನು ಬೆಳೆಸುವದು | – | – | 1900 | – | |
| | | | ಒಟ್ಟು: | **155028.00** | **155028.00** | **155028.00** | | | | 10265 | | |
| 2 | ಗೋಕಾಕ | ಕೆಸಿಫ್ | ಇಲಾಖಾ ವತಿಯಿಂದ | 1361850.00 | 1361850.00 | 1361850.00 | 3ನೇ ವರ್ಷ ನೆಡುತೋಪು ನಿರ್ವಹಣೆ | | 21 | | | ಮುಕ್ತಾಯವಾಗಿದೆ |
| | | | ಒಟ್ಟು: | **1361850.00** | **1361850.00** | **1361850.00** | | | 21.00 | | | |
| 3 | ಗೋಕಾಕ | ಜಿಯುಎ | ಇಲಾಖಾ ವತಿಯಿಂದ | 302100.00 | 302100.00 | 302100.00 | ನೆಡುತೋಪು ಬೆಳೆಸುವುದು | 3 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿಯುಎ | ಇಲಾಖಾ ವತಿಯಿಂದ | 26970.00 | 26970.00 | 26970.00 | 2ನೇ ವರ್ಷ ನೆಡುತೋಪು ನಿರ್ವಹಣೆ | 3 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿಯುಎ | ಇಲಾಖಾ ವತಿಯಿಂದ | 35970.00 | 35970.00 | 35970.00 | 3ನೇ ವರ್ಷ ನೆಡುತೋಪು ನಿರ್ವಹಣೆ | 4 | | | | ಮುಕ್ತಾಯವಾಗಿದೆ |
| | ಗೋಕಾಕ | ಜಿಯುಎ | ಇಲಾಖಾ ವತಿಯಿಂದ | 777450.00 | 777450.00 | 777450.00 | ಮಾನ್ಸೂನ್ ನೆಡುತೋಪು ಬೆಳೆಸುವುದು | 3 | | | | ಮುಕ್ತಾಯವಾಗಿದೆ |
| | ಬೆಳಗಾವಿ ಸಾ.ಅ | ಜಿಯುಎ | ಇಲಾಖಾ ವತಿಯಿಂದ | 777800.00 | 777800.00 | 777800.00 | ನೆಡುತೋಪು ಬೆಳೆಸುವದು | – | 3.00 | – | – | ಮುಕ್ತಾಯವಾಗಿದೆ |
| | | | ಒಟ್ಟು: | **1920290.00** | **1920290.00** | **1920290.00** | | **13** | **3** | | | |
| 4 | ಗೋಕಾಕ | ಆರ್.ಆರ್.ಪಿ | ಇಲಾಖಾ ವತಿಯಿಂದ | 597182.00 | 597182.00 | 597182.00 | ಮಾನ್ಸೂನ್ ನೆಡುತೋಪು ಬೆಳೆಸುವುದು | 3 | | | | ಮುಕ್ತಾಯವಾಗಿದೆ |
| | ಗೋಕಾಕ | ಆರ್.ಆರ್.ಪಿ | ಇಲಾಖಾ ವತಿಯಿಂದ | 208200.00 | 208200.00 | 208200.00 | 2ನೇ ವರ್ಷ ನೆಡುತೋಪು ನಿರ್ವಹಣೆ | 3 | | | | ಮುಕ್ತಾಯವಾಗಿದೆ |
| | ಗೋಕಾಕ | ಆರ್.ಆರ್.ಪಿ | ಇಲಾಖಾ ವತಿಯಿಂದ | 208200.00 | 208200.00 | 208200.00 | 3ನೇ ವರ್ಷ ನೆಡುತೋಪು ನಿರ್ವಹಣೆ | | | | | ಮುಕ್ತಾಯವಾಗಿದೆ |
| | | | ಒಟ್ಟು: | **1013582.00** | **1013582.00** | **1013582.00** | | **6** | | | | |
| | | | ಅಂತೂ ಒಟ್ಟು: | **4450750.00** | **4450750.00** | **4450750.00** | | **19** | **24** | **10265** | **0** | |

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2649
2. ಮಾನ್ಯ ಸದಸ್ಯರ ಹೆಸರು : ಶ್ರೀ ನಾಗೇಶ್ ಬಿ. ಸಿ. (ತಿಪಟೂರು)
3. ಉತ್ತರಿಸಬೇಕಾದ ದಿನಾಂಕ : 18/03/2021
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಮಹಿಳಾ ಸಿಬ್ಬಂದಿಗಳು ಪ್ರತಿದಿನ ಎಷ್ಟು ಗಂಟೆ ಕಾರ್ಯನಿರ್ವಹಿಸಬೇಕು; (ವಿವರ ನೀಡುವುದು) | ಕಾರ್ಖಾನೆಗಳ ಕಾಯ್ದೆ ಅನ್ವಯ ಮಹಿಳಾ ಕಾರ್ಮಿಕರು ಪ್ರತಿ ದಿನಕ್ಕೆ ಗರಿಷ್ಠ 9 ಗಂಟೆ, ವಾರಕ್ಕೆ 48 ಗಂಟೆಗಳ ಮಿತಿಗೆ ಒಳಪಟ್ಟು ಕಾರ್ಯನಿರ್ವಹಿಸಬೇಕಾಗಿರುತ್ತದೆ. |
| ಆ) | ಮಹಿಳಾ ಸಿಬ್ಬಂದಿಗಳಿಗೆ ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ಕನಿಷ್ಠವಾಗಿ ನೀಡಬೇಕಾಗಿರುವ ಸೌಲಭ್ಯಗಳೇನು; (ವಿವರ ಒದಗಿಸುವುದು) | **ಅ) ಕಾರ್ಖಾನೆಗಳ ಕಾಯ್ದೆ 1948 ರ ಅಡಿಯಲ್ಲಿ**<br>1. ಕುಡಿಯುವ ನೀರು<br>2. ಶೌಚಾಲಯ (ಪುರುಷ ಹಾಗೂ ಮಹಿಳೆಯರಿಗೆ ಪ್ರತ್ಯೇಕವಾಗಿ)<br>3. ಕುಳಿತುಕೊಂಡು ಕೆಲಸ ಮಾಡಲು ಆಸನದ ವ್ಯವಸ್ಥೆ<br>4. ಗಾಳಿ ಬೆಳಕಿನ ವ್ಯವಸ್ಥೆ<br>5. ತುರ್ತು ನಿರ್ಗಮನ ವ್ಯವಸ್ಥೆ<br>6. ಪ್ರಥಮ ಚಿಕಿತ್ಸೆ ಸೌಲಭ್ಯ<br>7. ಬಾಲವಾಡಿ ಸೌಲಭ್ಯ - 06 ವರ್ಷದೊಳಗಿನ ಮಕ್ಕಳ ಪಾಲನೆಗಾಗಿ<br>8. ವಿಶ್ರಾಂತಿ ಕೊಠಡಿ - 150 ಕ್ಕಿಂತ ಹೆಚ್ಚು ಕಾರ್ಮಿಕರನ್ನು ನೇಮಿಸಿಕೊಂಡಿದ್ದಲ್ಲಿ<br>9. ಕ್ಯಾಂಟೀನ್ ಸೌಲಭ್ಯ - 250 ಕ್ಕಿಂತ ಹೆಚ್ಚು ಕಾರ್ಮಿಕರನ್ನು ನೇಮಿಸಿಕೊಂಡಿದ್ದಲ್ಲಿ<br>10. ಆಂಬ್ಯುಲೆನ್ಸ್ ರೂಂ - 500 ಕ್ಕಿಂತ ಹೆಚ್ಚು ಕಾರ್ಮಿಕರನ್ನು ನೇಮಿಸಿಕೊಂಡಿದ್ದಲ್ಲಿ ಪೂರ್ಣ ಕಾಲಿಕ ವೈದ್ಯರು / ನರ್ಸ್ ನೇಮಕಾತಿ ಇರಬೇಕು.<br>11. ಕಲ್ಯಾಣಾಧಿಕಾರಿ - 500 ಕ್ಕಿಂತ ಹೆಚ್ಚು ಕಾರ್ಮಿಕರು ಇದ್ದಲ್ಲಿ ಕಾರ್ಮಿಕರ ಕುಂದು ಕೊರತೆಗಳ ಪರಿಶೀಲನೆ ಮತ್ತು ಕ್ರಮವಹಿಸಲು ಕಲ್ಯಾಣಾಧಿಕಾರಿ ನೇಮಕ ಮಾಡಿಕೊಳ್ಳಬೇಕು.<br>12. ಸುರಕ್ಷತಾಧಿಕಾರಿ - 1000 ಕ್ಕಿಂತ ಹೆಚ್ಚು ಕಾರ್ಮಿಕರು ಇದ್ದಲ್ಲಿ ಸುರಕ್ಷತೆಯ ವಿಚಾರವಾಗಿ ಕ್ರಮವಹಿಸಲು ಸುರಕ್ಷತಾಧಿಕಾರಿ ನೇಮಕ ಮಾಡಿಕೊಳ್ಳಬೇಕು.<br>13. ವೇತನ ಸಹಿತ ರಜೆ - ಹಿಂದಿನ ಸಾಲಿನಲ್ಲಿ ನಿರ್ವಹಿಸಿದ ಪ್ರತಿ 20 ದಿನಗಳ ಕೆಲಸಕ್ಕೆ 01 ದಿನ ವೇತನ ಸಹಿತ ರಜೆ.<br><br>**ಆ) ವೇತನ ಸಂದಾಯ ಕಾಯ್ದೆ 1936 ರಡಿಯಲ್ಲಿ :**<br>**1. ವೇತನ ಪಾವತಿ :**<br>ಒಂದು ಕಾರ್ಖಾನೆಯಲ್ಲಿ 1 ಸಾವಿರಕಿಂತ ಕಡಿಮೆ ಕಾರ್ಮಿಕರನ್ನು ನೇಮಿಸಿಕೊಂಡಿದ್ದಲ್ಲಿ 7ನೇ ತಾರೀಕಿನ ಒಳಗೆ ವೇತನ ಪಾವತಿಸಲಾಗುವುದು, ಅದೇ ರೀತಿ 1 ಸಾವಿರಕಿಂತ ಹೆಚ್ಚು ಕಾರ್ಮಿಕರನ್ನು ನೇಮಿಸಿಕೊಂಡಿದ್ದಲ್ಲಿ 10ನೇ ತಾರೀಕಿನ ಒಳಗೆ ವೇತನ ಪಾವತಿಸಲಾಗುವುದು. ವೇತನ ಚೀಟಿ ವಿತರಿಸಲಾಗುವುದು.<br><br>**ಇ) ಪ್ರಸೂತಿ ಸೌಲಭ್ಯ ಕಾಯ್ದೆಯಡಿಯಲ್ಲಿ :**<br>1. ಮಹಿಳಾ ಕಾರ್ಮಿಕರು ಮೊದಲ ಎರಡು ಮಕ್ಕಳ ಹೆರಿಗೆಗೆ 26 ವಾರಗಳ ವೇತನ ಸಹಿತ ಹೆರಿಗೆ ರಜೆಯನ್ನು ಪಡೆಯಲು ಅರ್ಹರಿರುತ್ತಾರೆ.<br>2. ನಂತರದ ಹೆರಿಗೆಗೆ 12 ವಾರಗಳ ರಜೆಯನ್ನು ವೇತನ ಸಹಿತ ಹೆರಿಗೆ ರಜೆಯನ್ನು ಪಡೆಯಲು ಅರ್ಹರಿರುತ್ತಾರೆ. |

| | | |
|---|---|---|
| | | 3. ಮಹಿಳಾ ಕಾರ್ಮಿಕರಿಗೆ ಪ್ರತಿ ಹೆರಿಗೆಗೆ ರೂ.3500/- ವೈದ್ಯಕೀಯ ಬೋನಸ್ ಪಡೆಯುವ ಹಕ್ಕಿರುತ್ತದೆ.<br>4. ಗರ್ಭಪಾತವಾದಲ್ಲಿ 6 ವಾರಗಳ ವೇತನ ಸಹಿತ ರಜೆ ಪಡೆಯಲು ಹಕ್ಕುಳ್ಳವಳಾಗಿರುತ್ತಾರೆ.<br>5. ಹೆರಿಗೆ ನಂತರ ಮಗುವಿನೊಂದಿಗೆ ಮಹಿಳೆ ಕೆಲಸಕ್ಕೆ ಹಿಂತಿರುಗಿದಾಗ ಮಗುವಿನ ಪೋಷಣೆಗಾಗಿ ಮಗುವಿಗೆ 15 ತಿಂಗಳು ತುಂಬುವವರೆಗೆ ಆಕೆಯ ಕೆಲಸದ ಅವಧಿಯಲ್ಲಿ ಕನಿಷ್ಠ ಎರಡು ಬಾರಿ ಹಾಲುಣಿಸುವುದಕ್ಕಾಗಿ ವಿರಾಮ ಕೊಡಬೇಕು.<br>6. ಮಹಿಳಾ ಕಾರ್ಮಿಕರು ಇಎಸ್ಐ ವ್ಯಾಪ್ತಿಗೆ ಒಳಪಟ್ಟಿದಲ್ಲಿ ಇಎಸ್ಐ ವತಿಯಿಂದ ಅಗತ್ಯ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಇಎಸ್ಐ ವ್ಯಾಪ್ತಿಗೆ ಒಳಪಡದ ಮಹಿಳಾ ಕಾರ್ಮಿಕರಿಗೆ ಇಲಾಖೆಯ ವತಿಯಿಂದ ಸೌಲಭ್ಯಗಳನ್ನು ಜಾರಿಗೊಳಿಸಲಾಗುತ್ತಿದೆ.<br><br>ಮುಂದುವರೆದು, ಬೋನಸ್ ಕಾಯ್ದೆ, ಮತ್ತು ಕನಿಷ್ಠ ವೇತನ ಕಾಯ್ದೆಗಳಡಿ ಲಭ್ಯವಿರುವ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. |
| ಇ) | ಅನೇಕ ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ಮಹಿಳಾ ಸಿಬ್ಬಂದಿಗಳಿಗೆ ಯಾವುದೇ ಸೌಲಭ್ಯ ಸಿಗದೇ ಹೆಚ್ಚುವರಿ ಗಂಟೆಗಳು ಕಾರ್ಯನಿರ್ವಹಿಸುತ್ತಿರುವುದು ಸರ್ಕಾರಕ್ಕೆ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಕುರಿತು ತೆಗೆದುಕೊಂಡ ಕ್ರಮಗಳೇನು (ವಿವರ ನೀಡುವುದು) | ಗಾರ್ಮೆಂಟ್ಸ್ ಕಾರ್ಖಾನೆಗಳು ಕನಿಷ್ಠ ವೇತನ ಕಾಯ್ದೆ ಅಡಿಯಲ್ಲಿ ಒಳಪಟ್ಟಿದ್ದು, ಕನಿಷ್ಠ ವೇತನ ಅಧಿಸೂಚಿಸಲ್ಪಟ್ಟಿದೆ. ಅದರ ಅನುಸಾರ ವೇತನವನ್ನು ನಿಗಧಿಪಡಿಸಿದ ಅವಧಿಯಲ್ಲಿ ಪಾವತಿಸಲಾಗುತ್ತಿದೆ.<br>ಕಾರ್ಖಾನೆಗಳ ಕಾಯ್ದೆ 1948 ರಡಿಯಲ್ಲಿ ಮಹಿಳಾ ಕಾರ್ಮಿಕರಿಗೆ ಹೆಚ್ಚುವರಿ ಅವಧಿ ಕೆಲಸ ನಿರ್ವಹಿಸಲು ಅವಕಾಶವಿರುವುದಿಲ್ಲ. ಈ ಬಗ್ಗೆ ಇಲಾಖೆಯು ಪರಿವೀಕ್ಷಣೆಯ ಸಂದರ್ಭದಲ್ಲಿ ಅಥವಾ ದೂರುಗಳು ಬಂದ ಸಂದರ್ಭದಲ್ಲಿ ಪರಿಶೀಲಿಸಿ ಸೂಕ್ತ ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ) | ಮಹಿಳಾ ಸಿಬ್ಬಂದಿಗಳ ಕುಂದುಕೊರತೆ ನೀಗಿಸಲು ನಿರ್ದಿಷ್ಟ ಅಧಿಕಾರಿಯನ್ನು ನೇಮಕ ಮಾಡುವ ಯೋಜನೆ ಸರ್ಕಾರದ ಮುಂದಿದೆಯೇ?<br>(ವಿವರ ನೀಡುವುದು) | 1. 500 ಕ್ಕಿಂತ ಹೆಚ್ಚು ಕಾರ್ಮಿಕರು ಇರುವ ಕಾರ್ಖಾನೆಗಳಲ್ಲಿ "ಕಲ್ಯಾಣಾಧಿಕಾರಿ" ಗಳ ನೇಮಕ ಕಡ್ಡಾಯವಾಗಿರುತ್ತದೆ. ಕಾರ್ಮಿಕರ ಕುಂದು ಕೊರತೆಗಳ ಬಗ್ಗೆ ಪರಿಶೀಲಿಸಿ ಇತ್ಯರ್ಥಪಡಿಸುವ ಕೆಲಸ ಕಲ್ಯಾಣಾಧಿಕಾರಿ ನಿರ್ವಹಿಸುತ್ತಾರೆ.<br>2. ಅನ್ವಯಿಸುವ ಕಾಯ್ದೆ/ನಿಯಮಗಳ ಅನುಸರಣೆಗಾಗಿ ಕಾರ್ಮಿಕ ಇಲಾಖೆಯ ಅಧಿಕಾರಿಗಳು ಮತ್ತು ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಅಧಿಕಾರಿಗಳು ಆಗಿಂದಾಗ್ಗೆ ಭೇಟಿ ನೀಡಿ ಪರಿವೀಕ್ಷಣೆ ನಡೆಸಿ ಕ್ರಮವಹಿಸಿರುತ್ತಾರೆ.<br>3. ಇಲಾಖೆಯು ಕಾರ್ಮಿಕರ ಕುಂದು ಕೊರತೆಗಳ ವಿಲೇವಾರಿಗಾಗಿ 24*7 ಕಾರ್ಮಿಕ ಸಹಾಯವಾಣಿ ಒದಗಿಸಿದ್ದು, ಅದರ ವಿವರ ಕೆಳಕಂಡಂತೆ ಇರುತ್ತದೆ.<br>ಉಚಿತ ಸಹಾಯವಾಣಿ : 155214<br>ಟ್ವೀಟರ್ : @karmikar_Sahaya<br>ವಾಟ್ಸಾಪ್ ಸಂಖ್ಯೆ : 9333333684<br>ಇ-ಮೇಲ್ ವಿಳಾಸ :labourhelpline.karnataka.govt@gmail.com |

ಕಾಇ–ಕಾಬಾಸೇ/13/2021

16/7/2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** | : | 2801 |
| **ಮಾನ್ಯ ಸದಸ್ಯರ ಹೆಸರು** | : | ಶ್ರೀ ನಿರಂಜನ್ ಕುಮಾರ್ ಸಿ.ಎಸ್. (ಗುಂಡ್ಲುಪೇಟೆ) |
| **ಉತ್ತರಿಸುವ ಸಚಿವರು** | : | ಪ್ರವಾಸೋದ್ಯಮ, ಪರಿಸರ ಹಾಗೂ ಜೀವಿಶಾಸ್ತ್ರ ಸಚಿವರು |
| **ಉತ್ತರಿಸುವ ದಿನಾಂಕ** | : | 18-03-2021 |

*****

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬಂಡೀಪುರ ಸಫಾರಿ ಕೇಂದ್ರಕ್ಕೆ ಬರುವ ಪ್ರವಾಸಿಗಳಿಗೆ ವಿವಿಧ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಹಾಗೂ ಇತರ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಅನುದಾನ ಮಂಜೂರಾತಿ ಕೋರಿ ಸಲ್ಲಿಕೆಯಾದ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ;</td><td rowspan="2">ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶವು ಅರಣ್ಯ ಇಲಾಖೆಯ ಸುಪರ್ದಿಯಲ್ಲಿರುತ್ತದೆ. ಈ ಪ್ರದೇಶದಲ್ಲಿ ಮೂಲ ಸೌಕರ್ಯಗಳು ಮತ್ತು ಇತರೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳುವುದು ಅರಣ್ಯ ಇಲಾಖೆಯ ಕಾರ್ಯವ್ಯಾಪ್ತಿಗೆ ಬರುತ್ತದೆ. ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶಕ್ಕೆ ಹೆಚ್ಚಿನ ಸಂಖ್ಯೆಯ ಪ್ರವಾಸಿಗರು ಭೇಟಿ ನೀಡುತ್ತಿದ್ದು, ಪರಿಸರ ಪ್ರವಾಸೋದ್ಯಮ ಹಾಗೂ ಸಫಾರಿಯಿಂದಾಗಿ ಉತ್ತಮ ಆದಾಯ ಅರಣ್ಯ ಇಲಾಖೆಗೆ ಬರುತ್ತಿದ್ದು, ಮೂಲಸೌಕರ್ಯ ಅಭಿವೃದ್ಧಿಗಾಗಿ ಈ ಆದಾಯವನ್ನು ಬಳಕೆ ಮಾಡಬಹುದಾಗಿದೆ.<br><br>ಆದಾಗ್ಯೂ, 2019-20ನೇ ಸಾಲಿನಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ಚಾಮರಾಜನಗರ ಜಿಲ್ಲೆರವರು ಈ ಕೆಳಕಂಡ 4 ಅಭಿವೃದ್ಧಿ ಕಾಮಗಾರಿಗಳನ್ನು ರೂ.327.20 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಪ್ರಸ್ತಾವನೆಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ.<br><br>
<table>
<tr><th>ಕ್ರ. ಸಂ.</th><th>ಕಾಮಗಾರಿಯ ವಿವರ</th><th>ಅಂದಾಜು ಮೊತ್ತ</th></tr>
<tr><td>1</td><td>Providing approach Road & Internal Roads at Melukamanahalli Safari Centre at GS Betta Range during the year 2019-20.</td><td>143.20</td></tr>
<tr><td>2</td><td>Estimate for Construction of Ticketing Counter & Waiting Lounge (as per master plan serial no. 3 & 4) at Safari center at Melukamanahalli in G.S Betta Range during the year 2019-20.</td><td>34.20</td></tr>
<tr><td>3</td><td>Providing parking facilities to LMV and HMV Vehicles at Safari center at Melukamanahalli in G.S Betta Range during the year 2019-20.</td><td>118.80</td></tr>
<tr><td>4</td><td>Estimate for construction of Rest rooms (as per the master serial No. 7) at Safari center at Melukamanahalli in G.S Betta Range during the year 2019-20.</td><td>31.00</td></tr>
<tr><td></td><td>ಒಟ್ಟು</td><td>327.20</td></tr>
</table>
<br>ಈ 4 ಕಾಮಗಾರಿಗಳ ಪೈಕಿ ಕ್ರ.ಸಂ.2 ಮತ್ತು ಕ್ರ.ಸಂ 4ರ ಕಾಮಗಾರಿಗಳನ್ನು ಪೂರ್ಣಗೊಳಿಸಿರುವುದಾಗಿ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಕ್ಷೇತ್ರ ನಿರ್ದೇಶಕರು, ಹುಲಿಯೋಜನೆ, ಬಂಡೀಪುರರವರು ತಿಳಿಸಿರುತ್ತಾರೆ.</td></tr>
<tr><td>ಆ)</td><td>ಹಾಗಿದ್ದಲ್ಲಿ, ಯಾವಾಗ ಅನುದಾನ ಮಂಜೂರು ಮಾಡಿ, ಕಾಮಗಾರಿಗಳನ್ನು ಕೈಗೊಳ್ಳಲಾಗುವುದು? (ಸಂಪೂರ್ಣ ವಿವರ ನೀಡುವುದು)</td></tr>
</table>

| | | |
|---|---|---|
| | | ಈ ಹಿನ್ನೆಲೆಯಲ್ಲಿ ಉಳಿದ ಕಾಮಗಾರಿಗಳಿಗೆ ಪರಿಷ್ಕೃತ ವಿವರವಾದ ಅಂದಾಜುಪಟ್ಟಿ ಮತ್ತು ನಕ್ಷೆಯೊಂದಿಗೆ ಪ್ರಸ್ತಾವನೆ ಸಲ್ಲಿಸುವಂತೆ ಕೋರಿ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಕ್ಷೇತ್ರ ನಿರ್ದೇಶಕರು, ಹುಲಿಯೋಜನೆ, ಬಂಡೀಪುರ, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆರವರಿಗೆ ಪತ್ರ ಬರೆಯಲಾಗಿದೆ.<br><br>ಪರಿಷ್ಕೃತ ಪ್ರಸ್ತಾವನೆ ಸ್ವೀಕೃತವಾದ ನಂತರ ಅನುದಾನ ಲಭ್ಯತೆ ಅನುಗುಣವಾಗಿ ಪರಿಶೀಲಿಸಿ ಅಗತ್ಯ ಕ್ರಮವಹಿಸಲಾಗುವುದು. |

ಸಂಖ್ಯೆ: ಟಿಓಆರ್ 46 ಟಿಡಿವಿ 2021

(ಸಿ.ಪಿ.ಯೋಗೇಶ್ವರ)
ಪ್ರವಾಸೋದ್ಯಮ ಮತ್ತು ಪರಿಸರ
ಹಾಗೂ ಜೀವಿಶಾಸ್ತ್ರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3043
ಸದಸ್ಯರ ಹೆಸರು : ಶ್ರೀ ಮಸಾಲ ಜಯರಾಮ್ (ತುರುವೇಕೆರೆ)
ಉತ್ತರಿಸುವ ದಿನಾಂಕ : 18.03.2021
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ತುರುವೇಕೆರೆ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯ ಗುಬ್ಬಿ ತಾಲ್ಲೂಕಿನ ಸಿ.ಎಸ್.ಪುರ ಗ್ರಾಮದಲ್ಲಿ 2013ನೇ ಸಾಲಿನಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಮಂಜೂರಾಗಿದ್ದು, ಇದುವರೆವಿಗೂ ಸ್ವಂತ ಕಟ್ಟಡ ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಬಂದಿದ್ದಲ್ಲಿ, ಸ್ವಂತ ಕಟ್ಟಡ ನಿರ್ಮಾಣ ಮಾಡಲು ಜಮೀನು ಮಂಜೂರಾಗಿ ಕಟ್ಟಡ ನಿರ್ಮಾಣಕ್ಕೆ ಸಲ್ಲಿಸಿದ್ದ ಪ್ರಸ್ತಾವನೆ ಪ್ರಸ್ತುತ ಯಾವ ಹಂತದಲ್ಲಿದೆ; | ಸದರಿ ಕಾಲೇಜಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಜಮೀನು ಮಂಜೂರಾಗಿದ್ದು, 2021-22ನೇ ಸಾಲಿನಲ್ಲಿ ಕೋವಿಡ್ ನಿಂದಾಗಿ ಯಾವುದೇ ಹೊಸ ಕಾಮಗಾರಿಗಳನ್ನು ಮಂಜೂರು ಮಾಡಿರುವುದಿಲ್ಲ. 2021-22ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸದರಿ ಕಾಮಗಾರಿಯನ್ನು ಅನುದಾನದ ಲಭ್ಯತೆಯನ್ನಾಧರಿಸಿ ಸೇರ್ಪಡೆಗೊಳಿಸಲು ಪರಿಶೀಲಿಸಿ ಕ್ರಮವಹಿಸಲಾಗುವುದು. |
| ಇ) | ಸದರಿ ಕಟ್ಟಡವನ್ನು ಯಾವಾಗ ನಿರ್ಮಾಣ ಮಾಡಲಾಗುವುದು; | ಅನುದಾನ ಲಭ್ಯತೆಗೆ ಅನುಗುಣವಾಗಿ ನಿಯಮಾನುಸಾರ ಅಗತ್ಯ ಕ್ರಮ ವಹಿಸಲಾಗುವುದು. |
| ಈ) | ಈ ವಿಳಂಬಕ್ಕೆ ಕಾರಣವೇನು? (ಸಂಪೂರ್ಣ ಮಾಹಿತಿ ನೀಡುವುದು) | 2020-21ನೇ ಸಾಲಿನಲ್ಲಿ ಹೊಸ ಕಾಮಗಾರಿಗಳ ಕ್ರಿಯಾ ಯೋಜನೆಗೆ ಅನುದಾನ ಕಡಿತಗೊಳಿಸಿರುವುದರಿಂದ ಈ ಹೊಸ ಕಾಮಗಾರಿಯನ್ನು ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲ. |

ಕಡತ ಸಂಖ್ಯೆ: ಇಡಿ 31 ಹೆಚ್‌ಪಿಸಿ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2607

ಮಾನ್ಯ ಸದಸ್ಯರ ಹೆಸರು : ಶ್ರೀ. ಪರಣ್ಣ ಈಶ್ವರಪ್ಪ ಮುನವಳ್ಳಿ (ಗಂಗಾವತಿ)

ಉತ್ತರಿಸುವ ದಿನಾಂಕ : 18.03.2021

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು(ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)

| ಪ್ರಶ್ನೆ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ). | ಗಂಗಾವತಿ ತಾಲ್ಲೂಕು ಕೇಂದ್ರದಲ್ಲಿ ನಡೆಯುತ್ತಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಸಿಬ್ಬಂದಿಗಳ ಕೊರತೆಯಿರುವುದರಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| (ಆ) | ಬಂದಿದ್ದಲ್ಲಿ, ಖಾಲಿ ಇರುವ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು; (ಸಂಪೂರ್ಣ ವಿವರ ನೀಡುವುದು) | 2019–20ನೇ ಶೈಕ್ಷಣಿಕ ಸಾಲಿನಿಂದ ಹೊಸದಾಗಿ ಪ್ರಾರಂಭಿಸಲಾದ, ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಗಂಗಾವತಿ, ಕೊಪ್ಪಳ ಜಿಲ್ಲೆ ಈ ಸಂಸ್ಥೆಗೆ ಬೋಧಕ/ಬೋಧಕೇತರ ಹುದ್ದೆಗಳನ್ನು ಸೃಜಿಸಬೇಕಾಗಿರುತ್ತದೆ. ಪ್ರಸ್ತುತ ಸದರಿ ಸಂಸ್ಥೆಗಳ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಸಮೀಪದ ಸಂಸ್ಥೆಗಳಿಂದ 4 ಸಹಾಯಕ ಪ್ರಾಧ್ಯಾಪಕರು ಮತ್ತು ಒಬ್ಬ ಉಪನ್ಯಾಸಕರನ್ನು ನಿಯೋಜನೆ ಮೇರೆಗೆ ಹಾಗೂ 15 ಅರೆಕಾಲಿಕ ಅತಿಥಿ ಉಪನ್ಯಾಸಕರುಗಳನ್ನು ನೇಮಿಸಿಕೊಳ್ಳುವ ಮುಖಾಂತರ ನಿರ್ವಹಿಸಲಾಗುತ್ತಿದೆ. ಅಲ್ಲದೇ ಇಬ್ಬರು ದ್ವಿತೀಯ ದರ್ಜೆ ಸಹಾಯಕರನ್ನು ನಿಯೋಜನೆ ಮೇರೆಗೆ ಹಾಗೂ ಅವಶ್ಯವಿರುವ 10 ಗ್ರೂಪ್–ಡಿ ಸಿಬ್ಬಂದಿಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಂಡು ಸಂಸ್ಥೆಯ ಶೈಕ್ಷಣಿಕ ಹಾಗೂ ಆಡಳಿತಾತ್ಮಕ ಚಟುವಟಿಕೆಗಳನ್ನು ನಿರ್ವಹಿಸಲಾಗುತ್ತಿದೆ.<br><br>ಎಐಸಿಟಿಇ, ನವದೆಹಲಿ ಇವರ ಮಾರ್ಗಸೂಚಿಯಲ್ಲಿ ಪರಿಷ್ಕೃತ ವಿದ್ಯಾರ್ಥಿ ಹಾಗೂ ಬೋಧಕರ ಅನುಪಾತ 20:1ರಂತೆ ಪರಿಷ್ಕರಿಸಲಾಗಿದೆ. ಆದರೆ ಈಗಾಗಲೇ ಹಾಲಿಯಿರುವ ಇಂಜಿನಿಯರಿಂಗ್ ಕಾಲೇಜುಗಳಲ್ಲಿ 15:1ರ ಅನುಪಾತದಲ್ಲಿ ಉಪನ್ಯಾಸಕರ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ. ಆರ್ಥಿಕ ಇಲಾಖೆಯ ಸೂಚನೆಯಂತೆ ಈಗಾಗಲೇ ಹಾಲಿಯಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ 15:1ರಂತೆ ಮಂಜೂರಾದ ಹುದ್ದೆಗಳನ್ನು ಪರಿಷ್ಕೃತ 20:1ರಂತೆ ಮರು ವಿಂಗಡಿಸಿ, ಹೆಚ್ಚಾದ ಹುದ್ದೆಗಳನ್ನು ಹೊಸ ಸಂಸ್ಥೆಗಳಿಗೆ ವರ್ಗಾಯಿಸಲು ಸೂಚಿಸಲಾಗಿದೆ. |

| | | |
|---|---|---|
| | | ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಬೋಧಕ/ಬೋಧಕೇತರ ಹುದ್ದೆಗಳನ್ನು ಮರುವಿಂಗಡನೆ ಮಾಡಲು ಇಲಾಖೆಯ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯು ನೀಡುವ ವರದಿಯನ್ವಯ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಗಂಗಾವತಿ ಇಲ್ಲಿಗೆ ಅವಶ್ಯವಿರುವ ಹುದ್ದೆಗಳನ್ನು ಮಂಜೂರು ಮಾಡಲು ಕ್ರಮ ಕೈಗೊಳ್ಳಲಾಗುವುದು. |
| (ಇ) | ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ವಿದ್ಯಾರ್ಥಿಗಳಿಗೆ ಹಾಗೂ ಸಿಬ್ಬಂದಿಗಳಿಗೆ ಮೂಲಭೂತ ಸೌಲಭ್ಯಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| (ಈ) | ಬಂದಿದ್ದಲ್ಲಿ, ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಯಾವಾಗ ಅನುದಾನ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಗಂಗಾವತಿ ಸಂಸ್ಥೆಗೆ ಅಗತ್ಯವಿರುವ ಡೆಸ್ಕ್‌ಗಳು, ಕಂಪ್ಯೂಟರ್, ಇತರೆ ಸಾಮಾಗ್ರಿಗಳನ್ನು ಹಾಗೂ ಗ್ರಂಥಾಲಯಕ್ಕೆ ಪುಸ್ತಕಗಳನ್ನು ಒದಗಿಸುವ ಸಂಬಂಧ ಕಳೆದ 2 ವರ್ಷಗಳಲ್ಲಿ ಈ ಕೆಳಕಂಡಂತೆ ಅನುದಾನವನ್ನು ಒದಗಿಸಲಾಗಿದೆ.<br><br>ವರ್ಷ — ಯಂತ್ರೋಪಕರಣ, ಪುಸ್ತಕ ಹಾಗೂ ಪೀಠೋಪಕರಣ ಒದಗಿಸಲು ಬಿಡುಗಡೆ ಮಾಡಲಾದ ಅನುದಾನದ ವಿವರ (ರೂ. ಲಕ್ಷಗಳಲ್ಲಿ)<br>2018-19 — 66.40<br>2019-20 — 81.00<br>ಒಟ್ಟು — 147.40<br><br>ಎಐಸಿಟಿಇ, ನವದೆಹಲಿ ಇವರ ಮಾರ್ಗಸೂಚಿಗಳನುಸಾರ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಗಂಗಾವತಿ ಈ ಸಂಸ್ಥೆಗೆ ಕಲ್ಪಿಸಬೇಕಾದ ಯಂತ್ರೋಪಕರಣ, ಪುಸ್ತಕ ಮತ್ತು ಪೀಠೋಪಕರಣ ಸೌಲಭ್ಯಗಳ ಕೊರತೆಯ ಕುರಿತು ಪ್ರಾಂಶುಪಾಲರಿಂದ ಗ್ಯಾಪ್ ಅನಾಲಿಸಿಸ್ ಮಾಹಿತಿಯನ್ನು ಪಡೆಯಲಾಗಿದ್ದು, ಸದರಿ ಮಾಹಿತಿಯನ್ವಯ ರೂ.1195.61 ಲಕ್ಷಗಳ ಅವಶ್ಯಕತೆ ಇರುತ್ತದೆ. ಆರ್ಥಿಕ ಇಲಾಖೆಯು ಒದಗಿಸುವ ಅನುದಾನಕ್ಕೆ ಅನುಗುಣವಾಗಿ ಹಂತ ಹಂತವಾಗಿ ಅವಶ್ಯಕವಿರುವ ಎಲ್ಲಾ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಕ್ರಮ ಕೈಗೊಳ್ಳಲಾಗುವುದು. |

ಇಡಿ 42 ಟಿಇಸಿ 2021

(ಡಾ॥ ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು,
(ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ).

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2620

2) ಸದಸ್ಯರ ಹೆಸರು : ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ)

3) ಉತ್ತರಿಸುವ ದಿನಾಂಕ : 18.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ತೀರ್ಥಹಳ್ಳಿ ವಿಧಾನ ಸಭಾಕ್ಷೇತ್ರದ ವ್ಯಾಪ್ತಿಯಲ್ಲಿ ಕಾಡಾನೆ, ಕಾಡುಕೋಣ ಮತ್ತು ಕಾಡುಹಂದಿ ಮತ್ತು ಮಂಗಗಳ ಹಾವಳಿ ಹೆಚ್ಚಾಗಿದ್ದು, ರೈತರು ಬೆಳೆದ ಬೆಳೆಗಳು ಹಾಳಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಈ ಪ್ರಾಣಿಗಳ ಹಾವಳಿ ತಡೆಗಟ್ಟಲು ಸರ್ಕಾರ ಕೈಗೊಂಡಿರುವ ಕ್ರಮವೇನು; | ತೀರ್ಥಹಳ್ಳಿ ವಿಧಾನ ಸಭಾ ಕ್ಷೇತ್ರದ ತೀರ್ಥಹಳ್ಳಿ ತಾಲ್ಲೂಕಿನ ಆಗುಂಬೆ ಅರಣ್ಯ ವಲಯ ವ್ಯಾಪ್ತಿಯಲ್ಲಿ ಕಾಡಾನೆ, ಕಾಡುಕೋಣ ಮತ್ತು ಕಾಡುಹಂದಿಗಳ ಹಾವಳಿಯನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br><br>1. ತೀರ್ಥಹಳ್ಳಿ ತಾಲ್ಲೂಕು ಆಗುಂಬೆ ವಲಯದಲ್ಲಿ ಒಟ್ಟು 5.722 ಕಿ.ಮೀ. ಆನೆ ನಿರೋಧಕ ಕಂದಕ ನಿರ್ಮಿಸಲಾಗಿದೆ.<br><br>2. ತೀರ್ಥಹಳ್ಳಿ ತಾಲ್ಲೂಕು ಆಗುಂಬೆ ವಲಯದಲ್ಲಿ ಕಾಡಾನೆ ಹಾವಳಿ ತಡೆಗಟ್ಟಲು ಒಂದು ಕ್ಷಿಪ್ರ ಕಾರ್ಯಚರಣೆ ಪಡೆಯನ್ನು ರಚಿಸಲಾಗಿದೆ.<br><br>3. ಮಂಗಗಳ ಹಾವಳಿ ತಡೆಗಟ್ಟಲು ಮಂಗಗಳಿಗೆ ಒಂದು ಪುನರ್ವಸತಿ ಕೇಂದ್ರವನ್ನು ಶಿವಮೊಗ್ಗ ಜಿಲ್ಲೆಯ ಸಾಗರ ಅರಣ್ಯ ವಿಭಾಗದ ವ್ಯಾಪ್ತಿಯಲ್ಲಿ ಸ್ಥಾಪಿಸಲು ಉದ್ದೇಶಿಸಲಾಗಿದೆ. ಇದಕ್ಕಾಗಿ 2020-21ನೇ ಸಾಲಿಗೆ ರೂ. 25.00 ಲಕ್ಷಗಳ ಅವಕಾಶ ಕಲ್ಪಿಸಲಾಗಿದೆ. ಈ ಸಂಬಂಧ ಕೈಗೊಂಡ ಕ್ರಮಗಳು ಈ ಮುಂದಿನಂತಿವೆ: |

.....2

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| | | ➢ ಮಂಗಗಳ ಸಂತಾನಹರಣ ಶಸ್ತ್ರಚಿಕಿತ್ಸೆಗಾಗಿ 12 ಜನ ಪಶುವೈದ್ಯಾಧಿಕಾರಿಗಳಿಗೆ ಸೂಕ್ತ ತರಬೇತಿ ನೀಡಲಾಗಿದೆ.<br>➢ ಮಂಗಗಳನ್ನು ಸೆರೆ ಹಿಡಿಯಲು ಬೋನುಗಳನ್ನು ಖರೀದಿ ಮಾಡಲಾಗಿರುತ್ತದೆ.<br>➢ ಸೆರೆ ಹಿಡಿದ ಮಂಗಗಳನ್ನು ಪಶುವೈದ್ಯಕೀಯ ಕಾಲೇಜಿಗೆ ಕೊಂಡೊಯ್ದು, ಸದರಿ ಮಂಗಗಳನ್ನು ಸಂತಾನಹರಣ ಶಸ್ತ್ರ ಚಿಕಿತ್ಸೆಗೆ ಒಳಪಡಿಸಿ, ಚಿಕಿತ್ಸೆಯ ನಂತರ ಅವುಗಳ ಅಹಾರ ಮತ್ತು ಔಷದೋಪಚಾರ ಮಾಡಿ 2-3 ದಿನಗಳ ಕಾಲ ಅವುಗಳನ್ನು ಸೂಕ್ತ ನಿಗಾದಲ್ಲಿಟ್ಟು, ಗುಣಮುಖ ಹೊಂದಿರುವುದನ್ನು ಖಚಿತ ಪಡಿಸಿಕೊಂಡ ನಂತರ ಮರಳಿ ಕಾಡಿಗೆ ಬಿಡುವ ಕಾರ್ಯ ಕೈಗೊಳ್ಳಲಾಗಿರುತ್ತದೆ.<br>➢ ಸೆರೆಹಿಡಿದ ಮಂಗಗಳ ಸಂತಾನಹರಣ ಚಿಕಿತ್ಸೆಗಾಗಿ ಅಗತ್ಯವಿರುವ ತಾಂತ್ರಿಕತೆಯಿಂದ ಕೂಡಿದ ಸುಸಜ್ಜಿತ ಮೊಬೈಲ್ ವಾಹನ ಖರೀದಿಸಲು ಉದ್ದೇಶಿಸಲಾಗಿದೆ.<br><br>4. ಮಂಗಗಳ ಸಂತಾನೋತ್ಪತ್ತಿಯನ್ನು ನಿಯಂತ್ರಿಸಲು ಮಂಗಗಳಿಗೆ ಸಂತಾನ ಹರಣ ಶಸ್ತ್ರಚಿಕಿತ್ಸೆ ಮಾಡಿ, ಪುನಃ ಕಾಡಿಗೆ ಬಿಡುವ ಕಾರ್ಯವನ್ನು ಶಿವಮೊಗ್ಗ ಜಿಲ್ಲಾ ವ್ಯಾಪ್ತಿಯಲ್ಲಿ ಕೈಗೊಳ್ಳಲು ಯೋಜಿಸಲಾಗುತ್ತಿದೆ. |
| ಇ) | ರೈತರ ಬೆಳೆಗಳ ನಷ್ಟಕ್ಕೆ ಪರಿಹಾರ ಕೊಡುವುದರ ಬಗ್ಗೆ ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ? (ವಿವರ ನೀಡುವುದು) | ➢ ಸರ್ಕಾರದ ಆದೇಶ ಸಂಖ್ಯೆ ಎಫ್‌ಇಇ 130 ಎಫ್‌ಡಬ್ಲ್ಯೂಎಲ್ 2016 ದಿನಾಂಕ: 19-09-2016 ಆದೇಶದಲ್ಲಿ ವಿವಿಧ ಬೆಳೆಗಳಿಗೆ ದರಗಳನ್ನು ನಿಗದಿಪಡಿಸಿದ್ದು, ಸದರಿ ದರಗಳನ್ವಯ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಬೆಳೆಹಾನಿ ಪ್ರಕರಣಗಳಿಗೆ ನಿಯಮಾನುಸಾರ ದಯಾತ್ಮಕ ಧನ ಪಾವತಿಸಲಾಗುತ್ತಿದೆ (ಪ್ರತಿ ಲಗತ್ತಿಸಿದೆ).<br><br>➢ ಇತ್ತೀಚಿನ ದಿನಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ಇ-ತಂತ್ರಾಂಶದ ಮೂಲಕ ಅರ್ಜಿಗಳನ್ನು ಸ್ವೀಕರಿಸಲಾಗುತ್ತಿದ್ದು, ಆದ್ಯತೆ ಮೇರೆಗೆ ನಿಯಮಾನುಸಾರ ಪರಿಶೀಲಿಸಿ, ಶೀಘ್ರವೇ ಸಂತ್ರಸ್ತರ ಖಾತೆಗೆ ಪರಿಹಾರವನ್ನು ನೇರವಾಗಿ ಪಾವತಿಸುವ ಪ್ರಕ್ರಿಯೆಯನ್ನು ಇ-ಪರಿಹಾರ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ. |

ಸಂಖ್ಯೆ: ಅಪಜೀ 53 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಕಾಡು ಪ್ರಾಣಿಗಳ ಹಾವಳಿಯಿಂದ ಬೆಳೆನಾಶ, ಮಾನವನ ಪ್ರಾಣಹಾನಿ, ಶಾಶ್ವತ ಅಂಗವಿಕಲತೆ, ಸಾಕುಪ್ರಾಣಿಗಳ ಪ್ರಾಣಹಾನಿ, ಆಸ್ತಿಪಾಸ್ತಿ ಹಾನಿ ಹಾಗೂ ಗಾಯಗೊಂಡವರಿಗೆ ನೀಡಲಾಗುತ್ತಿರುವ ಪರಿಹಾರದ ಮೊತ್ತವನ್ನು ಪರಿಷ್ಕರಿಸುವ ಬಗ್ಗೆ.

*******

**ಓದಲಾಗಿದೆ:**

1) ಸರ್ಕಾರದ ಆದೇಶದ ಸಂಖ್ಯೆ: ಅಪಜೀ 52 ಎಫ್‌ಡಬ್ಲ್ಯುಎಲ್ 96, ದಿನಾಂಕ: 12-02-2002.
2) ಸರ್ಕಾರದ ಆದೇಶದ ಸಂಖ್ಯೆ: ಅಪಜೀ 259 ಎಫ್‌ಡಬ್ಲ್ಯುಎಲ್ 2006, ದಿನಾಂಕ: 17-01-2007.
3) ಸರ್ಕಾರದ ಪತ್ರ ಸಂಖ್ಯೆ: ಅಪಜೀ 162 ಎಫ್‌ಡಬ್ಲ್ಯುಎಲ್ 2008, ದಿನಾಂಕ: 05.06.2009.
4) ಸರ್ಕಾರದ ಆದೇಶದ ಸಂಖ್ಯೆ: ಅಪಜೀ 70 ಎಫ್‌ಡಬ್ಲ್ಯುಎಲ್ 2009, ದಿನಾಂಕ: 10-08-2010.
5) ಸರ್ಕಾರದ ಆದೇಶ ಸಂಖ್ಯೆ: ಅಪಜೀ 143 ಎಫ್‌ಡಬ್ಲ್ಯುಎಲ್ 2010, ದಿನಾಂಕ: 30/04/2011
6) ಸರ್ಕಾರದ ಆದೇಶ ಸಂಖ್ಯೆ: ಅಪಜೀ 109 ಎಫ್‌ಎಪಿ 2014, ದಿನಾಂಕ: 13.08.2014.
7) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ(ವನ್ಯಜೀವಿ), ಬೆಂಗಳೂರು ಇವರ ಪತ್ರ ಸಂಖ್ಯೆ: ಪ್ರಮುಅಸಂ(ವಜೀ)/ಸಿ2/ಸಿಆರ್-37/2011-12, ದಿನಾಂಕ: 29.06.2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಿಂದ (6)ರ ವರೆಗಿನ ಸರ್ಕಾರದ ಆದೇಶಗಳಲ್ಲಿ
ವನ್ಯಪ್ರಾಣಿಗಳಿಂದ ಬೆಳೆ ನಾಶ, ಮಾನವ ಪ್ರಾಣ ಹಾನಿ, ಸಾಕು ಪ್ರಾಣಿಗಳ ಪ್ರಾಣ ಹಾನಿ, ಶಾಶ್ವತ
ಅಂಗವಿಕಲತೆ, ಗಾಯಗೊಂಡ ಹಾಗೂ ಆಸ್ತಿಪಾಸ್ತಿ ನಷ್ಟ ಪ್ರಕರಣಗಳಿಗೆ ಸಂಬಂಧಿಸಿದಂತೆ
ಪಾವತಿಸುತ್ತಿರುವ ದಯಾತ್ಮಕ ಧನವನ್ನು ಕಾಲಕಾಲಕ್ಕೆ ಪರಿಷ್ಕರಿಸಿ ನಿಗಧಿಪಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಪತ್ರ ದಿನಾಂಕ:05.06.2009ರಲ್ಲಿ
ವನ್ಯಪ್ರಾಣಿಗಳಿಂದ ಉಂಟಾದ ಬೆಳೆ ನಾಶಕ್ಕೆ ಸಂಬಂಧಿಸಿದಂತೆ, 37 ಬೆಳೆಗಳಿಗೆ ಪ್ರತಿ ಬೆಳೆಗೆ
ಸಂಬಂಧಿಸಿದಂತೆ ಪಾವತಿಸಲಾದ ದಯಾತ್ಮಕ ದರವನ್ನು ಪರಿಷ್ಕರಿಸಿ, ನಿಗಧಿಪಡಿಸಲಾಗಿದೆ. 2009ರಲ್ಲಿ
ವನ್ಯಪ್ರಾಣಿಗಳಿಂದ ಉಂಟಾದ ಬೆಳೆ ನಾಶಕ್ಕೆ ದಯಾತ್ಮಕ ದರವನ್ನು ನಿಗಧಿಪಡಿಸಲಾಗಿದ್ದು,
ಇದುವರೆವಿಗೂ ಅದರ ಪರಿಷ್ಕರಣೆಯಾಗಿರುವುದಿಲ್ಲ, ಬೆಲೆ ಪರಿಷ್ಕರಣೆಯಾಗಿ ಈಗಾಗಲೇ ಏಳು
ವರ್ಷಗಳು ಅವಧಿ ಕಳೆದಿದ್ದು, ಬೆಳೆನಾಶಕ್ಕೆ ಪರಿಹಾರಧನದ ಪರಿಷ್ಕರಣೆಯ ಅಗತ್ಯವಿದೆ. ಮೇಲೆ
ಕ್ರಮ ಸಂಖ್ಯೆ (7)ರಲ್ಲಿ ಓದಲಾದ ದಿನಾಂಕ:29.06.2016ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ
ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರು ಈ ದರಗಳನ್ನು ದ್ವಿಗುಣಗೊಳಿಸಲು ಶಿಫಾರಸ್ಸು
ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿನಾಂಕ:30.04.2011ರ ಸರ್ಕಾರಿ ಆದೇಶದಲ್ಲಿ
ಶಾಶ್ವತ ಅಂಗವಿಕಲತೆ ಮತ್ತು ಭಾಗಶ: ಅಂಗವಿಕಲತೆಗೆ ಪರಿಹಾರಧನವನ್ನು ನಿಗಧಿಪಡಿಸಲಾಗಿದೆ.
ವನ್ಯಪ್ರಾಣಿಗಳಿಂದ ಉಂಟಾಗುವ ಶಾಶ್ವತ ಅಂಗವಿಕಲತೆ ಮತ್ತು ಭಾಗಶ: ಶಾಶ್ವತ ಅಂಗವಿಕಲತೆಗಳಿಗೆ
ಸಹ ದಯಾತ್ಮಕ ದರಗಳನ್ನು ಪರಿಷ್ಕರಿಸುವ ಅವಶ್ಯಕತೆಯಿದೆ. ಕೇಂದ್ರ ಸರ್ಕಾರವು ಜಾರಿಗೊಳಿಸಿರುವ
ಆಮ್ ಆದ್ಮಿ ಭಿಮಾ ಯೋಜನೆಯಲ್ಲಿ ಶಾಶ್ವತ ಅಂಗವಿಕಲತೆಗೆ ನೀಡಲಾಗುತ್ತಿರುವ ವಿಮಾ ಮೊತ್ತದ
ಅರ್ಧದಷ್ಟನ್ನು ಭಾಗಶ: ಶಾಶ್ವತ ಅಂಗವಿಕಲತೆಗೆ ನಿಗಧಿಪಡಿಸಲಾಗಿದೆ. ಅದೇ ರೀತಿ
ವನ್ಯಪ್ರಾಣಿಗಳಿಂದ ಶಾಶ್ವತ ಅಂಗವಿಕಲತೆ ಮತ್ತು ಭಾಗಶ: ಶಾಶ್ವತ ಅಂಗವಿಕಲತೆ ಹೊಂದುವ
ವ್ಯಕ್ತಿಗಳಿಗೆ ದಯಾತ್ಮಕ ದರವನ್ನು ಅನುಕ್ರಮವಾಗಿ ರೂ. 5.00 ಲಕ್ಷಗಳು ಮತ್ತು ರೂ.2.50
ಲಕ್ಷಗಳಿಗೆ ಹೆಚ್ಚಿಸಿ ನಿಗಧಿಗೊಳಿಸುವ ಬಗ್ಗೆ ಪರಿಶೀಲಿಸಲಾಗಿದೆ.

2..........

ದಿನಾಂಕ:30.04.2011ರಲ್ಲಿ ಕಾಡುಪ್ರಾಣಿಗಳಿಂದ ಗಾಯಗೊಂಡ ಪ್ರತಿ ವ್ಯಕ್ತಿಗೆ ಗರಿಷ್ಠ ಮೊತ್ತ ರೂ.20,000/-ವನ್ನು ಪರಿಹಾರ ಧನವಾಗಿ ನಿಗಧಿಪಡಿಸಲಾಗಿದೆ. ಅದೇ ರೀತಿ ಕಾಡಾನೆಗಳ ದಾಳಿಯಿಂದ ಉಂಟಾದ ಆಸ್ತಿ ನಷ್ಟಕ್ಕೆ ಪ್ರತಿ ಪ್ರಕರಣಕ್ಕೆ ರೂ.7,000/-ಗಳ ಗರಿಷ್ಠ ಮೊತ್ತವನ್ನು ನಿಗಧಿಪಡಿಸಲಾಗಿದೆ. ಈ ಪರಿಹಾರ ಧನವನ್ನು ನಿಗಧಿಪಡಿಸಿ, ಈಗಾಗಲೇ ಐದು ವರ್ಷಕ್ಕಿಂತ ಹೆಚ್ಚು ಅವಧಿಯಾಗಿದ್ದು, ಇದನ್ನು ಸಹ ಹೆಚ್ಚಿಸಿ, ನಿಗಧಿಪಡಿಸುವ ಅಗತ್ಯವಿದೆ.

ಮೇಲ್ಕಂಡ ಹಿನ್ನೆಲೆಯಲ್ಲಿ, ವನ್ಯಪ್ರಾಣಿಗಳಿಂದ ಉಂಟಾಗುವ ಬೆಳೆನಾಶ, ಶಾಶ್ವತ ಅಂಗವಿಕಲತೆ/ಭಾಗಶ: ಶಾಶ್ವತ ಅಂಗವಿಕಲತೆ, ಗಾಯಗೊಂಡವರಿಗೆ ಮತ್ತು ಕಾಡಾನೆಯಿಂದ ಆಸ್ತಿ ಹಾನಿಗೆ ಸಂಬಂಧಿಸಿದಂತೆ ಪ್ರಸ್ತುತದಲ್ಲಿರುವ ದಯಾತ್ಮಕ ಪರಿಹಾರಧನದ ದರಗಳನ್ನು ಹೆಚ್ಚಿಸುವ, ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ ಪರಿಶೀಲಿಸಲಾಗಿದೆ.

ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

<u>ಸರ್ಕಾರದ ಆದೇಶ ಸಂಖ್ಯೆ: ಅಪಜೀ 130 ಎಫ್‌ಡಬ್ಲ್ಯೂಎಲ್ 2016</u>
<u>ಬೆಂಗಳೂರು. ದಿನಾಂಕ: 19.09.2016</u>

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವನ್ಯಪ್ರಾಣಿಗಳಿಂದ ಉಂಟಾದ ಬೆಳೆಯ ನಾಶಕ್ಕೆ ದಯಾತ್ಮಕ ದರ, ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗುವ ಶಾಶ್ವತ ಅಂಗವಿಕಲತೆ ಮತ್ತು ಭಾಗಶ: ಶಾಶ್ವತ ಅಂಗವಿಕಲತೆ ಹೊಂದುವ ವ್ಯಕ್ತಿಗಳಿಗೆ ಪರಿಹಾರಧನ, ಕಾಡುಪ್ರಾಣಿಗಳಿಂದ ಗಾಯಗೊಂಡ ಪ್ರತಿ ವ್ಯಕ್ತಿಗೆ ಗರಿಷ್ಠ ಪರಿಹಾರಧನ ಹಾಗೂ ಕಾಡಾನೆ ದಾಳಿಯಿಂದ ಉಂಟಾದ ಆಸ್ತಿ ನಷ್ಟ ಪ್ರತಿ ಪ್ರಕರಣಕ್ಕೆ ಈಗ ನಿಗಧಿಪಡಿಸಲಾಗಿರುವ ದಯಾತ್ಮಕ ದರ ಮತ್ತು ಪರಿಹಾರವನ್ನು ಅನುಬಂಧದಲ್ಲಿರುವಂತೆ ತಕ್ಷಣದಿಂದ ಜಾರಿಗೆ ಬರುವಂತೆ ಹೆಚ್ಚಿಸಿ ನಿಗಧಿಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 793 ವೆಚ್ಚ-5/2016, ದಿನಾಂಕ: 17.09.2016ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

19.09.16

(ಯು.ಹೆಚ್.ನಾರಾಯಣಸ್ವಾಮಿ)
ಸರ್ಕಾರದ ಉಪ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಗೆ,
ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ಇವರಿಗೆ ಮುಂದಿನ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಹಾಗೂ ಈ ಆದೇಶದ 500 ಪ್ರತಿಗಳನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು - 560 003 ಇವರಿಗೆ ಹಾಗೂ 250 ಪ್ರತಿಗಳನ್ನು ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಗೆ ಒದಗಿಸಲು ಕೋರಿದೆ.

<u>ಪ್ರತಿಗಳು:</u>

1. ಪ್ರಧಾನ ಮಹಾಲೇಖಪಾಲರು, (ಲೆಕ್ಕಪತ್ರ/ಲೆಕ್ಕಪರಿಶೋಧನೆ) ಕರ್ನಾಟಕ, ಬೆಂಗಳೂರು.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, (ಅರಣ್ಯಪಡೆ ಮುಖ್ಯಸ್ಥರು) ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು.

4. ಜಿಲ್ಲಾ ಅಪರ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು/ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು/ ಅರಣ್ಯ ಸಂರಕ್ಷಣಾಧಿಕಾರಿಗಳು/ಉಪ ಅರಣ್ಯ ಸಂರಕ್ಷಣಾಧಿಕಾರಿಗಳು (ಪ್ರಾದೇಶಿಕ/ವನ್ಯಜೀವಿ)/ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು (ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಬೆಂಗಳೂರು ಇವರ ಮುಖಾಂತರ).
5. ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
6. ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-5), ವಿಧಾನಸೌಧ, ಬೆಂಗಳೂರು.
7. ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

ಸರ್ಕಾರಿ ಆದೇಶ ಸಂಖ್ಯೆ: ಅಪಜೀ 130 ಎಫ್‌ಡಬ್ಲ್ಯೂಎಲ್ 2016
ದಿನಾಂಕ:19.09.2016ಕ್ಕೆ ಅನುಬಂಧ

1. ಕಾಡು ಪ್ರಾಣಿಗಳಿಂದ ಉಂಟಾದ ಬೆಳೆ ನಾಶಕ್ಕೆ ಪರಿಹಾರ ಧನ

| ಕ್ರ. ಸಂ. | ಬೆಳೆ | ಪ್ರಸ್ತುತ ನಿಗಧಿಯಾಗಿರುವ ದರ/ಕ್ವಿಂಟಾಲ್‌ಗೆ (ರೂ.ಗಳಲ್ಲಿ) | ಪರಿಷ್ಕೃತ ದರ/ಕ್ವಿಂಟಾಲ್‌ಗೆ (ರೂ.ಗಳಲ್ಲಿ) |
|---|---|---|---|
| 1. | ಭತ್ತ | 660/- | 1320/- |
| 2. | ಜೋಳ | 620/- | 1240/- |
| 3. | ಮೆಕ್ಕೆ ಜೋಳ | 620/- | 1240/- |
| 4. | ಸಜ್ಜೆ | 600/- | 1200/- |
| 5. | ರಾಗಿ | 600/- | 1200/- |
| 6. | ತೊಗರಿ | 1550/- | 3100/- |
| 7. | ಹೆಸರು | 1700/- | 3400/- |
| 8. | ಉದ್ದು | 1700/- | 3400/- |
| 9. | ಕಬ್ಬು | 81.18 | 162.36/- |
| 10. | ಹತ್ತಿ | 1985/- | 3970/- |
| 11. | ಶೇಂಗಾ(ನೆಲಗಡಲೆ) | 1550/- | 3100/- |
| 12. | ಸೂರ್ಯಕಾಂತಿ | 1510/- | 3020/- |
| 13. | ಸೋಯಾ | 980/- | 1960/- |
| 14. | ಎಳ್ಳು | 1580/- | 3160/- |
| 15. | ಹುಚ್ಚೆಳ್ಳು | 1240/- | 2480/- |
| 16. | ಕಂಬು | 600/- | 1200/- |
| 17. | ಬಟಾಣಿ | 2300/- | 4600/- |
| 18. | ಹಲಸಂದೆ | 1200/- | 2400/- |
| 19. | ಅವರೆ | 1121/- | 2242/- |
| 20. | ಹಾಗಲಕಾಯಿ | 900/- | 1800/- |
| 21. | ಬದನೆಕಾಯಿ | 400/- | 800/- |
| 22. | ನುಗ್ಗೆಕಾಯಿ | 1600/- | 3200/- |
| 23. | ಗೆಡ್ಡೆಕೋಸು | 500/- | 1000/- |
| 24. | ಬೆಂಡೆಕಾಯಿ | 600/- | 1200/- |
| 25. | ಮೂಲಂಗಿ | 350/- | 700/- |
| 26. | ಹೀರೆಕಾಯಿ | 500/- | 1000/- |
| 27. | ಪಡವಲಕಾಯಿ | 500/- | 1000/- |
| 28. | ತೊಂಡೆಕಾಯಿ | 600/- | 1200/- |
| 29. | ಹೂಕೋಸು | 400/- | 800/- |
| 30. | ಬೀಟ್‌ರೂಟ್ | 819/- | 1638/- |
| 31. | ಈರುಳ್ಳಿ | 654/- | 1308/- |

| | | | |
|---|---|---|---|
| 32. | ಟಮೊಟೋ | 294/- | 588/- |
| 33. | ಆಲೂಗಡ್ಡೆ | 1067/- | 2134/- |
| 34. | ಕ್ಯಾರೆಟ್ | 1114/- | 2228/- |
| 35. | ಬೀನ್ಸ್ | 1195/- | 2390/- |
| 36. | ಅರಿಶಿನ | 2100/- | 4200/- |
| 37. | ಕರಿಬೂಜ(ಕಲ್ಲಂಗಡಿ) | 700/- | 1400/- |
| 38. | ಹಸಿಮೆಣಸಿನಕಾಯಿ | 977/- | 1954/- |
| 39. | ದಪ್ಪ ಮೆಣಸಿನಕಾಯಿ | 1000/- | 2000/- |
| 40. | ಶುಂಠಿ | 1935/- | 3870/- |
| 41. | ನವಣೆ | 1050/- | 2100/- |
| 42. | ಎಲೆಕೋಸು | 348/- | 696/- |
| 43. | ಕೊತ್ತಂಬರಿ | 1780/- | 3560/- |
| 44. | ಕಾಫಿ | 100/- ಒಂದು ಗಿಡಕ್ಕೆ | 200/- ಒಂದು ಗಿಡಕ್ಕೆ |
| 45. | ಏಲಕ್ಕಿ | 400/- ಕೆ.ಜಿ.ಗೆ. | 800/- ಕೆ.ಜಿ.ಗೆ. |
| 46. | ಮೆಣಸು | 90/- ಕೆ.ಜಿ.ಗೆ | 180/- ಕೆ.ಜಿ.ಗೆ. |
| 47. | ಕಿತ್ತಲೆ<br>i) 5 ವರ್ಷಕ್ಕಿಂತ ಕಡಿಮೆ ವಯಸ್ಸಿನ ಗಿಡಗಳಿಗೆ<br>ii) 5 ವರ್ಷ ಮತ್ತು ಮೇಲ್ಪಟ್ಟ ವಯಸ್ಸಿನ ಗಿಡಗಳಿಗೆ | <br>100/- ಒಂದು ಗಿಡಕ್ಕೆ<br><br>160/- ಒಂದು ಗಿಡಕ್ಕೆ | <br>200/- ಒಂದು ಗಿಡಕ್ಕೆ<br>320/- ಒಂದು ಗಿಡಕ್ಕೆ |
| 48. | ಅಡಿಕೆ/ತೆಂಗು<br>i) 5 ವರ್ಷಕ್ಕಿಂತ ಕಡಿಮೆ ವಯಸ್ಸಿನ ಗಿಡಗಳಿಗೆ<br>ii) ವರ್ಷ 7ರಿಂದ 9 ವರ್ಷ ವಯಸ್ಸಿನ ಮರಗಳಿಗೆ<br>iii) 10 ವರ್ಷ ಮತ್ತು ಮೇಲ್ಪಟ್ಟ ವಯಸ್ಸಿನ ಗಿಡಗಳಿಗೆ | <br>200/- ಒಂದು ಗಿಡಕ್ಕೆ<br>400/- ಒಂದು ಮರಕ್ಕೆ<br>1000/- ಒಂದು ಮರಕ್ಕೆ | <br>400/- ಒಂದು ಗಿಡಕ್ಕೆ<br>800/- ಒಂದು ಮರಕ್ಕೆ<br>2000/- ಒಂದು ಮರಕ್ಕೆ |
| 49. | ಬಾಳೆ | 80/- ಒಂದು ಗಿಡಕ್ಕೆ | 160/- ಒಂದು ಗಿಡಕ್ಕೆ |
| 50. | ಹರಳು | 2302/- ಒಂದು ಕ್ವಿಂಟಾಲ್‌ಗೆ | 4604/- ಒಂದು ಕ್ವಿಂಟಾಲ್‌ಗೆ |
| 51. | ಮೆಂತ್ಯ ಸೊಪ್ಪು | 2/- ಒಂದು ಕಟ್ಟಿಗೆ | 4/- ಒಂದು ಕಟ್ಟಿಗೆ |
| 52. | ನಿಂಬೆ | 5/- ಪ್ರತಿ ಗಿಡಕ್ಕೆ | 10/-ಪ್ರತಿ ಗಿಡಕ್ಕೆ |
| 53. | ಗಜ ನಿಂಬೆ | 12/- ಪ್ರತಿ ಗಿಡಕ್ಕೆ | 24/-ಪ್ರತಿ ಗಿಡಕ್ಕೆ |
| 54. | ಚೆಂಡು ಮಲ್ಲಿಗೆ (ದಪ್ಪದು) | 100/- ಕೆ.ಜಿ.ಗೆ | 200/- ಕೆ.ಜಿ.ಗೆ |
| 55. | ಕಾಕಡ ಹೂವು | 40/- ಕೆ.ಜಿ.ಗೆ | 80/- ಕೆ.ಜಿ.ಗೆ |

| | | | |
|---|---|---|---|
| 56. | ಕನಕಾಂಬರ | 80-120 ಕೆ.ಜಿ.ಗೆ | 160-240/- ಕೆ.ಜಿ.ಗೆ |
| 57. | ಸೇವಂತ | 10-12 ಪ್ರತಿ ಮಾರು | 20-24/-ಪ್ರತಿ ಮಾರು |

II. ಶಾಶ್ವತ ಅಂಗವಿಕಲತೆ/ಭಾಗಶ: ಶಾಶ್ವತ ಅಂಗವಿಕಲತೆ/ ಕಾಡು ಪ್ರಾಣಿಗಳಿಂದ ಗಾಯಗೊಂಡ ವ್ಯಕ್ತಿಗಳಿಗೆ ಪರಿಹಾರ/ ಕಾಡಾನೆ ದಾಳಿಯಿಂದ ಉಂಟಾದ ಆಸ್ತಿ ನಷ್ಟಕ್ಕೆ ಪರಿಹಾರ

| | | | |
|---|---|---|---|
| 58. | ಕಾಡು ಪ್ರಾಣಿಯಿಂದ ಉಂಟಾಗುವ ಶಾಶ್ವತ ಅಂಗವಿಕಲತೆ | ರೂ.50,000 (ಐವತ್ತು ಸಾವಿರ ರೂಪಾಯಿ) | ರೂ.5.00 ಲಕ್ಷಗಳು (ಐದು ಲಕ್ಷಗಳು ರೂಪಾಯಿ) |
| 59 | ಕಾಡು ಪ್ರಾಣಿಯಿಂದ ಉಂಟಾಗುವ ಭಾಗಶ: ಶಾಶ್ವತ ಅಂಗವಿಕಲತೆ | ರೂ.20,000 (ಇಪ್ಪತ್ತು ಸಾವಿರ ರೂಪಾಯಿ) | ರೂ.2.50 ಲಕ್ಷಗಳು (ಎರಡು ಲಕ್ಷದ ಐವತ್ತು ಸಾವಿರ ರೂಪಾಯಿ) |
| 60 | ಕಾಡು ಪ್ರಾಣಿಗಳಿಂದ ಗಾಯಗೊಂಡ ಪ್ರತಿ ವ್ಯಕ್ತಿಗೆ ಗರಿಷ್ಟ ಮೊತ್ತ | ರೂ.20,000 (ಇಪ್ಪತ್ತು ಸಾವಿರ ರೂಪಾಯಿ) | ರೂ.30,000 (ಮೂವತ್ತು ಸಾವಿರ ರೂಪಾಯಿ) |
| 61 | ಕಾಡಾನೆ ದಾಳಿಯಿಂದ ಉಂಟಾದ ಆಸ್ತಿ ನಷ್ಟ ಪ್ರತಿ ಪ್ರಕರಣಕ್ಕೆ | ರೂ.7,000 (ಏಳು ಸಾವಿರ ರೂಪಾಯಿ) | ರೂ.10,000 (ಹತ್ತು ಸಾವಿರ ರೂಪಾಯಿ) |

ಈ ದಯಾತ್ಮಕ ಧನ ಪಾವತಿಗೆ ಸಂಬಂಧಿಸಿದಂತೆ ಈಗಾಗಲೇ ಮೇಲೆ ಓದಲಾಗಿರುವ ಸರ್ಕಾರಿ ಆದೇಶಗಳಲ್ಲಿ ನಿರ್ದಿಷ್ಟಪಡಿಸಿರುವ ಷರತ್ತು ಮತ್ತು ನಿಬಂಧನೆಗಳು ಯಾವುದೇ ಬದಲಾವಣೆ ಇಲ್ಲದೆ ಮುಂದುವರೆಯುತ್ತವೆ.

(ಯು.ಹೆಚ್.ನಾರಾಯಣಸ್ವಾಮಿ) ೨೧.೧೬.
ಸರ್ಕಾರದ ಉಪ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2071
ಮಾನ್ಯ ಸದಸ್ಯರ ಹೆಸರು : ಶ್ರೀ ವೀರಭದ್ರಯ್ಯ ಎಂ.ವಿ. (ಮಧುಗಿರಿ)
ಉತ್ತರಿಸಬೇಕಾದ ದಿನಾಂಕ : 18-3-2021
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ಮಧುಗಿರಿ ತಾಲ್ಲೂಕು ಕೇಂದ್ರಕ್ಕೆ ಹೊಸದಾಗಿ ಹೆರಿಗೆ ಮತ್ತು ಮಕ್ಕಳ ಆಸ್ಪತ್ರೆ ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಭಾರತ ಸರ್ಕಾರದ ಮಾರ್ಗಸೂಚಿಗಳನ್ವಯ ತಾಯಿ ಮತ್ತು ಮಕ್ಕಳ ಆಸ್ಪತ್ರೆಯನ್ನು ಮಂಜೂರು ಮಾಡಲು ಮಾಹೆಯಾನ 100 ಕ್ಕಿಂತ ಹೆಚ್ಚು ಹೆರಿಗೆಗಳು ಸಂಭವಿಸಬೇಕಾಗಿರುತ್ತದೆ. ಮಧುಗಿರಿ ತಾಲ್ಲೂಕು ಆಸ್ಪತ್ರೆಯಲ್ಲಿ ಪ್ರತಿ ಮಾಹೆ ಸುಮಾರು 20 ಹೆರಿಗೆಗಳು ಜರುಗುತ್ತಿರುವುದರಿಂದ ಹೊಸದಾಗಿ ಹೆರಿಗೆ ಮತ್ತು ಮಕ್ಕಳ ಆಸ್ಪತ್ರೆ ಮಂಜೂರು ಮಾಡುವ ಅಗತ್ಯತೆ ಇರುವುದಿಲ್ಲ ಹಾಗೂ ಈ ಕುರಿತು ಯಾವುದೇ ಪ್ರಸ್ತಾವನೆಯು ಸರ್ಕಾರದ ಮುಂದೆ ಇರುವುದಿಲ್ಲ. |
| 2 | ಹಾಗಿದ್ದಲ್ಲಿ, ಯಾವಾಗ ಮಂಜೂರು ಮಾಡಲಾಗುವುದು; (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ. |
| 3 | ಮಧುಗಿರಿ ತಾಲ್ಲೂಕು ಕೇಂದ್ರಕ್ಕೆ ಹೊಸದಾಗಿ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆ ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| 4 | ಹಾಗಿದ್ದಲ್ಲಿ, ಯಾವಾಗ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ. |

ಆಕುಕ 47 ಎಸ್.ಎಂ.ಎಂ. 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನಸಭೆ

15ನೇ ವಿಧಾನಸಭೆ 9ನೇ ಅಧಿವೇಶನ

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2985

2) ಸದಸ್ಯರ ಹೆಸರು : ಶ್ರೀ ಲಿಂಗೇಶ ಕೆ.ಎಸ್ (ಬೇಲೂರು)

3) ಉತ್ತರಿಸುವ ದಿನಾಂಕ : 18-03-2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೇಲೂರು ಕ್ಷೇತ್ರದ ವ್ಯಾಪ್ತಿಯ ಅರಣ್ಯ ಪ್ರದೇಶದಲ್ಲಿ ದೇವಿವನ ಹಾಗೂ ಟ್ರೀ ಪಾರ್ಕ್ ನಿರ್ಮಾಣ ಮಾಡಲು ರೂ.2.00ಕೋಟಿ ಅನುದಾನ ಮೀಸಲಿಟ್ಟಿರುವುದು ನಿಜವೇ; | ಹೌದು. |
| ಆ) | ಹಾಗಿದ್ದಲ್ಲಿ, ದೇವಿವನ ಮತ್ತು ಟ್ರೀ ಪಾರ್ಕ್ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ವಿಳಂಬವಾಗುತ್ತಿರುವುದಕ್ಕೆ ಕಾರಣವೇನು; | ವೃಕ್ಷೋದ್ಯಾನ ಮತ್ತು ದೈವೀವನವನ್ನು ನಿರ್ಮಾಣ ಮಾಡಲು ಸೂಕ್ತ ಸ್ಥಳವನ್ನು ಸರ್ಕಾರದ ಆದೇಶ ಸಂಖ್ಯೆ: ಅಪಜೀ 57 ಎಫ್ಎಪಿ 2020, ದಿನಾಂಕ: 13-10-2020ರ ಮಾರ್ಗಸೂಚಿಯನ್ವಯ ಆಯ್ಕೆ ಮಾಡಿದ ನಂತರ ಕ್ರಮ ಕೈಗೊಳ್ಳಲಾಗುವುದು. |
| ಇ) | ಯಾವ ಕಾಲಮಿತಿಯೊಳಗೆ ಕಾಮಗಾರಿಯನ್ನು ಪ್ರಾರಂಭಿಸಿ ಪೂರ್ಣಗೊಳಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | ವೃಕ್ಷೋದ್ಯಾನ/ದೈವೀವನ ನಿರ್ಮಾಣದ ಕುರಿತು ಸೂಕ್ತ ಪ್ರಸ್ತಾವನೆಗಳನ್ನು ಸ್ವೀಕರಿಸಿದ ನಂತರ, ಅನುದಾನದ ಲಭ್ಯತೆಯ ಮೇರೆಗೆ ಹಂತಹಂತವಾಗಿ ಕಾಮಗಾರಿಯನ್ನು ಕೈಗೊಳ್ಳಲಾಗುವುದು. |

ಸಂಖ್ಯೆ: ಅಪಜೀ 24 ಎಫ್‌ಟಿಎಸ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

**ಕರ್ನಾಟಕ ವಿಧಾನ ಸಭೆ**

ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ : **3004**

ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ (ಹೊಳೇನರಸೀಪುರ)

ಉತ್ತರಿಸಬೇಕಾದ ದಿನಾಂಕ : 18.03.2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಸರ್ಕಾರಿ ಪ್ರೌಢಶಾಲೆಗಳಲ್ಲಿ ಆಂಗ್ಲ ಭಾಷಾ ಬೋಧಕರ ಹುದ್ದೆಗಳು ಮಂಜೂರಾಗದೇ ಇರುವುದರಿಂದ ಹಾಗೂ ಆ ಹುದ್ದೆಗಳು ಖಾಲಿ ಇರುವುದರಿಂದ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ವಿದ್ಯಾರ್ಥಿಗಳು ಇತರೆ ವಿಷಯಗಳಲ್ಲಿ ಹೆಚ್ಚಿನ ಅಂಕ ಗಳಿಸಿದರೂ ಸಹ ಆಂಗ್ಲ ಭಾಷೆಯಲ್ಲಿ ಕಡಿಮೆ ಅಂಕ ಗಳಿಸಿ ಅನುತ್ತೀರ್ಣರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿದೆ<br>ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ 48 ಸರ್ಕಾರಿ ಪ್ರೌಢ ಶಾಲೆಗಳಿದ್ದು ಎಲ್ಲಾ ಶಾಲೆಗಳಲ್ಲಿ ಆಂಗ್ಲ ಭಾಷಾ ಶಿಕ್ಷಕರ ಹುದ್ದೆಗಳು ಮಂಜೂರಾಗಿರುತ್ತದೆ.<br><table><tr><th>ಮಂಜೂರಾದ ಆಂಗ್ಲ ಹುದ್ದೆಗಳು</th><th>ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆ</th><th>ಖಾಲಿ ಹುದ್ದೆಗಳ ಸಂಖ್ಯೆ</th></tr><tr><td>51</td><td>41</td><td>10</td></tr></table><br>ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಸರ್ಕಾರಿ ಪ್ರೌಢ ಶಾಲೆಗಳ 2019-20ನೇ ಸಾಲಿನ ಆಂಗ್ಲ ವಿಷಯ ಹಾಗೂ ಇತರೆ ವಿಷಯಗಳ ಎಸ್.ಎಸ್.ಎಲ್.ಸಿ ಶೇಕಡಾ ಫಲಿತಾಂಶದ ವಿವರ.<br><table><tr><th>ಕನ್ನಡ</th><th>ಆಂಗ್ಲ</th><th>ಹಿಂದಿ</th><th>ಗಣಿತ</th><th>ವಿಜ್ಞಾನ</th><th>ಸಮಾಜ ವಿಜ್ಞಾನ</th></tr><tr><td>95.43</td><td>93.05</td><td>96.59</td><td>95.43</td><td>92.78</td><td>94.82</td></tr></table><br>ಹೊಳೆನರಸೀಪುರ ವಿಧಾನಸಭಾ ಕ್ಷೇತ್ರದಲ್ಲಿ ಕಳೆದ ಬಾರಿಯ (2019-20ನೇ ಸಾಲಿನ) ಸರ್ಕಾರಿ ಪ್ರೌಢ ಶಾಲೆಗಳ ಶೇಕಡವಾರು ಫಲಿತಾಂಶದಲ್ಲಿ ಆಂಗ್ಲ ವಿಷಯದ ಫಲಿತಾಂಶವು ವಿಜ್ಞಾನ ವಿಷಯದ ಫಲಿತಾಂಶಕ್ಕಿಂತ ಉತ್ತಮವಾಗಿರುತ್ತದೆ.</td></tr>
<tr><td>ಆ)</td><td>ಹಾಗಿದ್ದಲ್ಲಿ, ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಸರ್ಕಾರಿ ಪ್ರೌಢಶಾಲೆಗಳಲ್ಲಿ ಖಾಲಿ ಇರುವ ಆಂಗ್ಲ ಭಾಷಾ ಬೋಧಕರ ಹುದ್ದೆಗಳನ್ನು ಮಂಜೂರು ಮಾಡಿ, ಭರ್ತಿ ಮಾಡಲು ಸರ್ಕಾರ ಯಾವ ಕಾಲಮಿತಿಯಲ್ಲಿ ಕ್ರಮ ಕೈಗೊಳ್ಳುವುದು? (ಸಂಪೂರ್ಣ ಮಾಹಿತಿ ನೀಡುವುದು)</td><td>ಹೊಳೆನರಸೀಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಎಲ್ಲಾ 48 ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಒಟ್ಟು 51 ಆಂಗ್ಲ ಭಾಷಾ ಶಿಕ್ಷಕರ ಹುದ್ದೆಗಳು ಮಂಜೂರಾಗಿದ್ದು, ಅವುಗಳಲ್ಲಿ 41 ಆಂಗ್ಲ ಭಾಷಾ ಸಹ ಶಿಕ್ಷಕರುಗಳು ಈಗಾಗಲೇ ಕಾರ್ಯನಿರ್ವಹಿಸುತ್ತಿದ್ದಾರೆ. ಇದರಲ್ಲಿ 10 ಹುದ್ದೆಗಳು ಖಾಲಿ ಇದ್ದು, ಈ ಖಾಲಿ ಹುದ್ದೆಗಳಿಗೆ ಎಸ್.ಎಸ್.ಎಲ್.ಸಿ ವಿದ್ಯಾರ್ಥಿಗಳಿಗೆ ಯಾವುದೇ ಶೈಕ್ಷಣಿಕ ತೊಂದರೆಯಾಗಬಾರದೆಂದು ತಾತ್ಕಾಲಿಕವಾಗಿ 3 ಅತಿಥಿ ಶಿಕ್ಷಕರನ್ನು ನೇಮಕ ಮಾಡಲಾಗಿದೆ ಹಾಗೂ ಉಳಿದ 7 ಹುದ್ದೆಗಳಿಗೆ ಅಕ್ಕ-ಪಕ್ಕದ ಶಾಲೆಗಳಿಂದ ತಾತ್ಕಾಲಿಕವಾಗಿ ನಿಯೋಜನೆ ಮಾಡಿ ಆಂಗ್ಲ ವಿಷಯವನ್ನು ಬೋಧಿಸಲಾಗುತ್ತಿದೆ.<br>ಎಸ್.ಎಸ್.ಎಲ್.ಸಿ ಫಲಿತಾಂಶ ಉತ್ತಮ ಪಡಿಸಲು ವಿಷಯವಾರು ಕ್ರಿಯಾ ಯೋಜನೆ ಸಿದ್ಧಪಡಿಸಿ, ಅದರಂತೆ ಕ್ರಮ ಕೈಗೊಳ್ಳಲಾಗುತ್ತಿದೆ. ದಿನಾಂಕ:1.2.2021ರಂದು ಹೊಳೆನರಸೀಪುರ ಕ್ಷೇತ್ರದ ಎಲ್ಲಾ ಪ್ರೌಢ ಶಾಲಾ ಮುಖ್ಯ ಶಿಕ್ಷಕರ ಸಭೆ ಕರೆದು ಫಲಿತಾಂಶ ಉತ್ತಮಪಡಿಸಲು ಮಾರ್ಗದರ್ಶನ ನೀಡಲಾಗಿದೆ. ತಾಲ್ಲೂಕಿನಲ್ಲಿ ವಿಷಯವಾರು ಕ್ಲಬ್ ರಚಿಸಿಕೊಂಡು ಶಿಕ್ಷಕರ ಕಾರ್ಯಾಗಾರಗಳನ್ನು ನಡೆಸಲಾಗುತ್ತಿದೆ.<br>ರಾಜ್ಯದಲ್ಲಿ ಒಟ್ಟು ಖಾಲಿ ಇರುವ 3590 ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಈ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ.</td></tr>
</table>

ಸಂಖ್ಯೆ: ಇಪಿ 26 ಎಲ್‌ಬಿಪಿ 2021

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

**ಕರ್ನಾಟಕ ವಿಧಾನಸಭೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 2970
ಮಾನ್ಯ ಸದಸ್ಯರ ಹೆಸರು : ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ).
ಉತ್ತರಿಸುವ ದಿನಾಂಕ : 18.03.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | 2020-21ನೇ ಸಾಲಿಗೆ ಖಾಸಗಿ ಅನುದಾನರಹಿತ ಪ್ರೌಢಶಾಲೆಗಳ ನೋಂದಣಿಗೆ ಅನುಮತಿ ನೀಡುವಲ್ಲಿ ಉತ್ತರ-ದಕ್ಷಿಣ ಎಂದು ತಾರತಮ್ಯ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;<br>ಹಾಗಿದ್ದಲ್ಲಿ, ಅದನ್ನು ಸರಿಪಡಿಸಲು ಸರ್ಕಾರವು ಕೈಗೊಂಡ ಕ್ರಮವೇನು; | ಬಂದಿಲ್ಲ<br>ರಾಜ್ಯದಲ್ಲಿ ಖಾಸಗಿ ಅನುದಾನರಹಿತ ಪ್ರೌಢಶಾಲೆಗಳ ನೋಂದಣಿಗೆ ಅನುಮತಿ ನೀಡಲು ಆಯಾ ವಲಯದ ಈ ಕೆಳಕಂಡ ಆಯುಕ್ತರುಗಳು ಸಕ್ಷಮ ಪ್ರಾಧಿಕಾರಿಗಳಾಗಿರುತ್ತಾರೆ.<br>1) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.<br>2) ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ.<br>3) ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಕಲಬುರಗಿ. |
| ಆ | ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು 2020-21ನೇ ಸಾಲಿಗೆ ಖಾಸಗಿ ಅನುದಾನರಹಿತ ಪ್ರೌಢಶಾಲೆಗಳ ನೋಂದಣಿಗೆ ಅನುಮತಿ ನೀಡುವಾಗ ತಿರಸ್ಕರಿಸಲ್ಪಟ್ಟ ಅರ್ಜಿಗಳಿಗೆ ಮತ್ತೊಮ್ಮೆ ದಾಖಲೆ ಸಲ್ಲಿಸಲು ಬೆಂಗಳೂರು ಮತ್ತು ಮೈಸೂರು ಭಾಗಕ್ಕೆ ಮಾತ್ರ ಅವಕಾಶವನ್ನು ನೀಡಿ ಇನ್ನುಳಿದ ಕಲಬುರಗಿ ಮತ್ತು ಧಾರವಾಡ ಭಾಗಕ್ಕೆ ಅವಕಾಶ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಸರ್ಕಾರದ ಪತ್ರ ಸಂಖ್ಯೆ: ಇಪಿ 62 ಎಸ್‌ಇಎಸ್ 2021, ದಿನಾಂಕ:23.02.2021ರಲ್ಲಿ ಈಗಾಗಲೇ ಅರ್ಜಿ ಸಲ್ಲಿಸಿ ವಿವಿಧ ಕಾರಣಗಳಿಗಾಗಿ ಮಾನ್ಯತೆ ತಿರಸ್ಕೃತಗೊಂಡಿದ್ದ ಖಾಸಗಿ ಅನುದಾನರಹಿತ ಪ್ರೌಢಶಾಲೆಗಳ ಅರ್ಜಿಗಳನ್ನು ಪರಿಶೀಲಿಸುವ ಸಲುವಾಗಿ ಆನ್‌ಲೈನ್ ಅರ್ಜಿ ಸಲ್ಲಿಕೆಗೆ ಈಗಾಗಲೇ ಬೆಂಗಳೂರು ಮತ್ತು ಮೈಸೂರು ವಿಭಾಗಗಳ ಶಾಲೆಗಳಿಗೆ ಅವಕಾಶ ಕಲ್ಪಿಸಿರುವಂತೆ ಧಾರವಾಡ ಮತ್ತು ಕಲಬುರಗಿ ಆಯುಕ್ತಾಲಯದ ವ್ಯಾಪ್ತಿಯಲ್ಲಿ ಬರುವ ಶಾಲೆಗಳಿಗೆ ಸಂಬಂಧಿಸಿದಂತೆ ಕೂಡಲೇ ಆನ್‌ಲೈನ್ ಅರ್ಜಿ ಸಲ್ಲಿಕೆಗೆ ಅವಕಾಶವನ್ನು ಕಲ್ಪಿಸಿ, ಪ್ರತ್ಯೇಕ ವೇಳಾಪಟ್ಟಿಯನ್ನು ಹೊರಡಿಸಿ ಸರ್ಕಾರದ ಸುತ್ತೋಲೆ ಸಂಖ್ಯೆ: ಇಪಿ 46 ಎಸ್‌ಹೆಚ್‌ಹೆಚ್ 2020, ದಿನಾಂಕ: 10-11-2020 ಮತ್ತು ದಿನಾಂಕ: 21-11-2020 ರನ್ವಯ ಪರಿಶೀಲಿಸಿ ಕ್ರಮವಹಿಸುವಂತೆ ಕಲಬುರಗಿ ಮತ್ತು ಧಾರವಾಡ ಜಿಲ್ಲೆಯ ಅಪರ ಆಯುಕ್ತರಿಗೆ ಪತ್ರದ ಮುಖಾಂತರ ಆದೇಶಿಸಿದೆ. |
| ಇ | ಹಾಗಿದ್ದಲ್ಲಿ, ಅಂತಹ ಅವಕಾಶವನ್ನು ಕಲಬುರಗಿ ಮತ್ತು ಧಾರವಾಡ ಭಾಗಕ್ಕೆ ನೀಡದಿರಲು ಕಾರಣವೇನು; | |
| ಈ | ಈ ತಾರತಮ್ಯವನ್ನು ಸರಿಪಡಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | |

ಸಂಖ್ಯೆ:ಇಪಿ 126 ಎಸ್‌ಇಎಸ್ 2021

(ಎಸ್.ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು

# ಕರ್ನಾಟಕವಿಧಾನಸಭೆ

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 3025

**ಮಾನ್ಯ ಸದಸ್ಯರ ಹೆಸರು** : ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ )

**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಪರಿಸರ ಹಾಗೂ ಜೀವಿಶಾಸ್ತ್ರ ಸಚಿವರು

**ಉತ್ತರಿಸುವ ದಿನಾಂಕ** : 18-03-2021

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ದಕ್ಷಿಣ ಕ್ಷೇತ್ರದಲ್ಲಿ ಪ್ರಸ್ತುತ ಇರುವ ಪ್ರವಾಸಿ ತಾಣಗಳು ಯಾವುವು; (ಮಾಹಿತಿ ನೀಡುವುದು) | ಪ್ರವಾಸೋದ್ಯಮ ಇಲಾಖೆಯಿಂದ 2020-25ರ ಕರ್ನಾಟಕ ಪ್ರವಾಸೋದ್ಯಮ ನೀತಿಯಡಿ ಬೀದರ್ ದಕ್ಷಿಣ ಕ್ಷೇತ್ರದಲ್ಲಿ ಗುರುತಿಸಿರುವ ಪ್ರವಾಸಿ ತಾಣಗಳ ವಿವರ ಈ ಕೆಳಕಂಡಂತಿದೆ.<br><br>ಕ್ರ. ಸಂ.: 1 / ಜಿಲ್ಲೆ/ ತಾಲ್ಲೂಕು: ಬೀದರ್ / ಪ್ರವಾಸಿ ತಾಣದ ಹೆಸರು: ಬೀದರ್ ಕೋಟೆ, ಪಾಪನಾಶಿನಿ, ಚೌಕಂಡಿ ಮತ್ತು ಬಹಮನಿ ಅಸ್ಸೂರ ಟೂಂಬ್ಸ್, ಕರೇಜ್ / ಪ್ರವಾಸಿ ತಾಣಗಳ ಸಂಖ್ಯೆ: 4 |
| ಆ) | ಸದರಿ ಪ್ರವಾಸಿ ತಾಣಗಳನ್ನು ಅಭಿವೃದ್ಧಿಪಡಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; (ಮಾಹಿತಿ ಒದಗಿಸುವುದು) | 1. ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 163 ಪ್ರವಾಯೋ 2008, ದಿನಾಂಕ: 14.08.2008ರಲ್ಲಿ ಬೀದರ್ ಜಿಲ್ಲೆಯ ಬೀದರ್ ಕೋಟೆಯಲ್ಲಿ ಧ್ವನಿ ಮತ್ತು ಬೆಳಕು ಅಳವಡಿಸುವ ಯೋಜನೆಯನ್ನು ರೂ.192.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಮೆ\|\| ಇನ್ನೋವೇಟಿವ್ ಲೈಟಿಂಗ್ ಸಿಸ್ಟಂ ಕಾರ್ಪ್ ಸಂಸ್ಥೆ, ಬೆಂಗಳೂರುರವರ ಮೂಲಕ ನಿರ್ವಹಿಸಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ. ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 162 ಪ್ರವಾಯೋ 2010, ದಿನಾಂಕ: 05-06-2010ರಲ್ಲಿ ಸದರಿ ಕಾಮಗಾರಿಯನ್ನು ರೂ.239.99 ಲಕ್ಷಗಳ ಅಂದಾಜುವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಪರಿಷ್ಕೃತ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.<br><br>2. ಬೀದರ್ ಜಿಲ್ಲೆಯ ಬೀದರ್ ಕೋಟೆ ಪ್ರದೇಶದಲ್ಲಿ ರೂ.252.43 ಲಕ್ಷಗಳ ಅಂದಾಜು ವೆಚ್ಚದಲ್ಲಿ ಪ್ರವಾಸಿ ಸೌಲಭ್ಯ ಅಭಿವೃದ್ಧಿಪಡಿಸಲು ಸರ್ಕಾರದ ಆದೇಶ ಸಂಖ್ಯೆ: ಪ್ರಇ 113 ಪ್ರವಾಯೋ 2016, ದಿನಾಂಕ: 18.03.2016ರಲ್ಲಿ ಸರ್ಕಾರದ ಅನುಮೋದನೆಯನ್ನು ನೀಡಲಾಗಿರುತ್ತದೆ. ಇಂಟರ್‌ಪ್ರಿಟೇಷನ್ ಸೆಂಟರ್ ಕೆಲಸ ಮುಕ್ತಾಯವಾಗಿದ್ದು, ಒಳ ಕಾಮಗಾರಿ ಪ್ರಾರಂಭಿಕ ಹಂತದಲ್ಲಿದೆ.<br><br>3. ಸರ್ಕಾರದ ಆದೇಶ ಸಂಖ್ಯೆ: ಪ್ರಇ 161 ಪ್ರವಾಯೋ 2016, ದಿನಾಂಕ: 23.04.2016ರಲ್ಲಿ ಬೀದರ್ ಜಿಲ್ಲೆಯ ಪ್ರವಾಸಿ ತಾಣಗಳನ್ನು ರೂ.10.00 ಕೋಟಿಗಳ ಅಂದಾಜು ವೆಚ್ಚದಲ್ಲಿ ಮಾದರಿ ಪ್ರವಾಸಿ ತಾಣಗಳನ್ನಾಗಿ ಅಭಿವೃದ್ಧಿಪಡಿಸಲು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದ್ದು, ಸದರಿ ಅನುದಾನದಲ್ಲಿ ಪಾಪನಾಶ ಕೆರೆಯ ಅಭಿವೃದ್ಧಿ ಕಾಮಗಾರಿಯನ್ನು ರೂ.150.00 ಲಕ್ಷಗಳ ಅಂದಾಜುವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಆದೇಶ ಸಂಖ್ಯೆ: ಪ್ರಇ 304 ಪ್ರವಾಯೋ 2016, ದಿನಾಂಕ: 31.03.2017ರಲ್ಲಿ ಸರ್ಕಾರದ ತಾತ್ವಿಕ |

| | | |
|---|---|---|
| | | ಅನುಮೋದನೆಯನ್ನು ನೀಡಲಾಗಿದೆ. ಈ ಕಾಮಗಾರಿಗೆ ಸಂಬಂಧಿಸಿದಂತೆ ಅಂದಾಜುಪಟ್ಟಿಯನ್ನು ಸಿದ್ಧಪಡಿಸಬೇಕಾಗಿರುತ್ತದೆ.<br><br>4. ಕೇಂದ್ರ ಪ್ರವಾಸೋದ್ಯಮ ಮಂತ್ರಾಲಯ, ಭಾರತ ಸರ್ಕಾರ ಇವರ ಪತ್ರ ಸಂಖ್ಯೆ: 5-PSW (12)/2009, ದಿನಾಂಕ: 22.09.2009ರಲ್ಲಿ ಬೀದರ್ ಜಿಲ್ಲೆಯ ಚೌಕಂಡಿ ಮತ್ತು ಅಸ್ಟೂರ ಟೂಂಬ್ಸ್ ಪ್ರದೇಶದಲ್ಲಿ ರೂ.318.27 ಲಕ್ಷಗಳ ಅಂದಾಜುವೆಚ್ಚದಲ್ಲಿ ಪ್ರವಾಸಿ ಸೌಲಭ್ಯಗಳನ್ನು ಅಭಿವೃದ್ಧಿಪಡಿಸಲು ಅನುಮೋದನೆಯನ್ನು ನೀಡಿರುತ್ತದೆ. ಈ ಕಾಮಗಾರಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ ಇವರಿಗೆ ರೂ.153.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಸದರಿ ಬಿಡುಗಡೆಯಾದ ರೂ.153.00 ಲಕ್ಷಗಳಲ್ಲಿ ರೂ.83,98,450/-ಗಳನ್ನು ವೆಚ್ಚ ಮಾಡಲಾಗಿರುತ್ತದೆ. ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ: ಪ್ರಇ 214 ಪ್ರವಾಯೋ 2015, ದಿನಾಂಕ: 05.10.2015ರಲ್ಲಿ ಈ ಕಾಮಗಾರಿಯನ್ನು ಪುರಾತತ್ವ ಅಧೀಕ್ಷಕರು, ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆ, ಧಾರವಾಡ ವೃತ್ತ ಇವರ ಮೂಲಕ ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಅದರಂತೆ ನೂತನ ಅನುಷ್ಠಾನ ಸಂಸ್ಥೆಗೆ ರೂ.100.00 ಲಕ್ಷಗಳನ್ನು ಬಿಡುಗಡೆಮಾಡಲಾಗಿರುತ್ತದೆ. ಪಾತ್‌ವೇ ಹಾಗೂ ಎಂಟ್ರನ್ಸ್ ಪ್ಲಾಜಾ ಕಾಮಗಾರಿಯು ಮುಕ್ತಾಯದ ಹಂತದಲ್ಲಿದೆ.<br><br>5. ಸರ್ಕಾರದ ಆದೇಶ ಸಂಖ್ಯೆ: ಪ್ರಇ 250 ಪ್ರವಾಯೋ 2018, ದಿನಾಂಕ: 25.09.2018ರ ಕಲಬುರಗಿ ವಿಭಾಗದ ಕ್ರ.ಸಂ. 10ರಲ್ಲಿ ಬೀದರ್ ಹೊರವಲಯದಲ್ಲಿರುವ ನರಸಿಂಹಝರಣ ದೇವಸ್ಥಾನದ ಹತ್ತಿರ ರೂ.200.00 ಲಕ್ಷಗಳ ಅಂದಾಜುವೆಚ್ಚದಲ್ಲಿ ಸ್ನಾನಗೃಹ, ಶೌಚಾಲಯ, ಲ್ಯಾಂಡ್ ಸ್ಕೇಪಿಂಗ್ ಹಾಗೂ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಅನುಮೋದನೆಯನ್ನು ನೀಡಲಾಗಿದೆ. ಸದರಿ ಕಾಮಗಾರಿಗೆ ಸಂಬಂಧಿಸಿದಂತೆ ಪ್ರವಾಸೋದ್ಯಮ ನಿರ್ದೇಶಕರ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: ಪ್ರಇ/ಯೋ-5/04/2018-19 (ಭಾಗ-16), ದಿನಾಂಕ: 28.01.2021ರಲ್ಲಿ ರೂ.200.00 ಲಕ್ಷಗಳ ಅಂದಾಜು ಪಟ್ಟಿಯನ್ನು ರೂ.191.00 ಲಕ್ಷಗಳಿಗೆ ಮಿತಿಗೊಳಿಸಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಅನುಷ್ಠಾನ ಸಂಸ್ಥೆಯು ಈ ಕಾಮಗಾರಿಗೆ ಟೆಂಡರ್ ಆಹ್ವಾನಿಸಬೇಕಾಗಿರುತ್ತದೆ. |
| ಇ) | ಈ ಕ್ಷೇತ್ರದಲ್ಲಿ ಹೊಸ ಪ್ರವಾಸಿ ತಾಣಗಳನ್ನು ನಿರ್ಮಿಸುವ ಯೋಜನಾ ಪ್ರಸ್ತಾವವು ಸರ್ಕಾರದ ಮುಂದಿದೆಯೇ; | ಇರುವುದಿಲ್ಲ. |
| ಈ) | ಹಾಗಿದ್ದಲ್ಲಿ, ಹೊಸ ಪ್ರವಾಸಿ ತಾಣಗಳನ್ನು ಯಾವ ಯಾವ ಸ್ಥಳದಲ್ಲಿ ನಿರ್ಮಿಸಲಾಗುವುದು? | ಉದ್ಭವಿಸುವುದಿಲ್ಲ. |

ಸಂಖ್ಯೆ: ಟಿಒಆರ್ 47 ಟಿಡಿವಿ 2021

(ಸಿ.ಪಿ.ಯೋಗೇಶ್ವರ್)
ಪ್ರವಾಸೋದ್ಯಮ, ಪರಿಸರ
ಹಾಗೂ ಜೀವಿಶಾಸ್ತ್ರ, ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1561
ಸದಸ್ಯರ ಹೆಸರು : ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್
ಉತ್ತರಿಸಬೇಕಾದ ದಿನಾಂಕ : 18.03.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರೌಢ ಶಾಲಾ ಮಕ್ಕಳಿಗೆ ವಿತರಿಸಲಾಗುತ್ತಿರುವ ಬೈಸಿಕಲ್‌ಗಳ ಗುಣಮಟ್ಟ ಕಳಪೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಇಲ್ಲ. |
| ಆ) | ಯೋಜನೆಯ ಆರಂಭಿಕ ವರ್ಷಗಳಿಗಿಂತ ಈಗಿನ ಬೈಸಿಕಲ್‌ಗಳು ಗುಣಮಟ್ಟದಲ್ಲಿ ಕಡಿಮೆಯಿರಲು ಕಾರಣಗಳೇನು. | ಉದ್ಭವಿಸುವುದಿಲ್ಲ.<br>ಸರ್ಕಾರವು ಉತ್ತಮ ಗುಣಮಟ್ಟದ ಬೈಸಿಕಲ್‌ಗಳನ್ನು ಪೂರೈಸುವ ಉದ್ದೇಶದಿಂದ ಆರ್ ಅಂಡ್ ಡಿ ಸೆಂಟರ್, ಲೂದಿಯಾನ ಇವರೊಂದಿಗೆ ಅಭಿಪ್ರಾಯ ಪಡೆದು ಬ್ಯೂರೋ ಆಫ್ ಇಂಡಿಯನ್ ಸ್ಟಾಂಡರ್ಡ್ (BIS) ರವರು 2014ರಲ್ಲಿ ನಿಗಧಿಸಪಡಿಸಿರುವ ಮಾನದಂಡಗಳನ್ನು ವಿಸ್ತಾರವಾಗಿ ಟೆಂಡರ್ ದಾಸ್ತಾವೇಜಿನಲ್ಲಿ ಅಳವಡಿಸಿ ಉತ್ತಮ ಗುಣಮಟ್ಟದ ಬೈಸಿಕಲ್‌ಗಳನ್ನು ಪೂರೈಕೆ ಮಾಡಲು ಕ್ರಮವಹಿಸಿರುತ್ತದೆ. |
| ಇ) | ಬೈಸಿಕಲ್‌ಗಳ ಗುಣಮಟ್ಟಕ್ಕೆ ಸರ್ಕಾರವು ನಿಗದಿಪಡಿಸಿದ ಮಾನದಂಡಗಳೇನು. | ಬೈಸಿಕಲ್‌ಗಳ ತಯಾರಿಕೆ ಹಂತದಲ್ಲಿ ಹಾಗೂ ಮಕ್ಕಳಿಗೆ ವಿತರಣೆ ಮಾಡಿದ ನಂತರ ಬೈಸಿಕಲ್‌ಗಳ ಗುಣಮಟ್ಟದ ಬಗ್ಗೆ ವಿಷ್ಯೂಯಲ್ ಇನ್ಸ್‌ಪೆಕ್ಷನ್ ಹಾಗೂ ಕ್ರ್ಯಾಷ್ ಟೆಸ್ಟ್‌ಗಳನ್ನು ಮೂರನೇ ಸಂಸ್ಥೆಯಾದ ಆರ್ ಅಂಡ್ ಡಿ ಸೆಂಟರ್ ಫಾರ್ ಬೈಸಿಕಲ್ ಅಂಡ್ ಸಿವಿಂಗ್ ಮೆಷಿನ್, |

| | | |
|---|---|---|
| | | ಲೂದಿಯಾನ( Research & Development Center for Bicycle & Sewing Machine, Ludhiana) ರವರಿಂದ ಪರಿಶೀಲನೆ ಮಾಡಿಸಿ ವರದಿಯನ್ನು ಪಡೆಯಲಾಗಿರುತ್ತದೆ. ಬ್ಲಾಕ್ ಹಂತದಲ್ಲಿ ಬೈಸಿಕಲ್‌ಗಳ ಜೋಡಣೆಯ ಕಾರ್ಯ ನಡೆಯುವ ಸಂದರ್ಭದಲ್ಲಿ ಪರಿಶೀಲನೆ ಮಾಡಲು ವಿವಿಧ ಹಂತಗಳಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳ ತಂಡವನ್ನು ರಚಿಸಿದ್ದು, ಸದರಿ ತಂಡವು ಜೋಡಣೆಯನ್ನು ಪರಿಶೀಲಿಸಿದ ನಂತರ ಶಾಲಾ ಮಟ್ಟದಲ್ಲಿ ಎಸ್‌ಡಿಎಂಸಿ ಸದಸ್ಯರು, ಶಾಲಾ ಮುಖ್ಯಸ್ಥರು ಹಾಗೂ ಸ್ಥಳೀಯ ಸರ್ಕಾರಿ ನೌಕರರನ್ನು ಒಳಗೊಂಡ ಸಮಿತಿಯಲ್ಲಿ ಬೈಸಿಕಲ್‌ಗಳ ಗುಣಮಟ್ಟ ಹಾಗೂ ಜೋಡಣೆ ಸರಿಯಾಗಿರುವುದನ್ನು ಖಾತ್ರಿ ಪಡಿಸಿಕೊಂಡು ನಂತರ ಶಾಲಾ ಮಕ್ಕಳಿಗೆ ವಿತರಣೆ ಮಾಡಲು ತಿಳಿಸಲಾಗಿದೆ. ಅದರಂತೆ ಶಾಲಾ ಹಂತದಲ್ಲಿ ಪರಿಶೀಲಿಸಿಕೊಂಡು ವಿತರಣೆ ಮಾಡಲಾಗಿರುತ್ತದೆ. |
| ಈ) | ಗ್ರಾಮಾಂತರ ಪ್ರದೇಶಗಳಲ್ಲಿ, ಬೈಸಿಕಲ್‌ಗಳನ್ನೇ ಅವಲಂಬಿಸಿ ಶಾಲೆಗೆ ಬರುವ ವಿದ್ಯಾರ್ಥಿಗಳಿಗೆ ಗುಣಮಟ್ಟದ ಬೈಸಿಕಲ್‌ಗಳನ್ನು ಪೂರೈಕೆ ಮಾಡಲು ಸರ್ಕಾರವು ಕೈಗೊಂಡ ಕ್ರಮಗಳೇನು? | ಉತ್ತಮ ಗುಣಮಟ್ಟದ ಬೈಸಿಕಲ್‌ಗಳನ್ನು ಪೂರೈಸುವ ಉದ್ದೇಶದಿಂದ ಆರ್ ಅಂಡ್ ಡಿ ಸೆಂಟರ್, ಲೂದಿಯಾನ ಇವರೊಂದಿಗೆ ಅಭಿಪ್ರಾಯ ಪಡೆದು ಬ್ಯೂರೋ ಆಫ್ ಇಂಡಿಯನ್ ಸ್ಟಾಂಡರ್ಡ್ (BIS) ರವರು 2014ರಲ್ಲಿ ನಿಗಧಿಪಡಿಸಿರುವ ಮಾನದಂಡಗಳನ್ನು ವಿಸ್ತಾರವಾಗಿ ಟೆಂಡರ್ ದಾಸ್ತಾವೇಜಿನಲ್ಲಿ ಅಳವಡಿಸಿ ಉತ್ತಮ ಗುಣಮಟ್ಟದ ಬೈಸಿಕಲ್‌ಗಳನ್ನು ಪೂರೈಕೆ ಮಾಡಲಾಗಿದೆ. |

**ಇಪಿ: 23 ಯೋಯೋಕ 2021**

(ಎಸ್.ಸುರೇಶ್ ಕುಮಾರ್)

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**